Government Oriental Library Series

EDITED BY PANDITS UNDER THE SUPERVISION OF THE CURATOR, GOVERNMENT ORIENTAL LIBRARY, MYSORE

Kannada Section No. VII

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

೪ನೆಯ ಸಂಪುಟ

## ಅರಣ್ಯಪರ್ವ

---

THE

# KARNATAKA MAHABHARATA

BY

KUMARAVYASA MAHAKAVI

Volume IV

ARANYA PARVA

EDITED BY

V. SYAMACHARYA

*Pandit, Government Oriental Library, Mysore*

Published under the authority of the Government of His Highness the Maharaja of Mysore

MYSORE:
PRINTED AT THE GOVERNMENT BRANCH PRESS
1918

# ಅವತರಣಿಕೆ.

ಈ ಪುಸ್ತಕವು ಕರ್ಣಾಟಕ ಮಹಾಭಾರತದ ನಾಲ್ಕನೆಯ ಸಂಚಿಕೆಯಾಗಿರುವುದು. ಈ ಗ್ರಂಥಕರ್ತನಾದ ಕುಮಾರವ್ಯಾಸನ ವಿಷಯದಲ್ಲಿ ಮತ್ತು ಆತನ ಭಾಷೆಯ ವಿಷಯದಲ್ಲಿಯೂ ಆವಶ್ಯಕವಾಗಿ ಬರೆಯಬೇಕಾದ ವಿಷಯಗಳೆಲ್ಲಾ (ಕನ್ನಡ ಸೆಕ್ಷರ್ 3—4ನೆಯವುಗಳಾದ) ಉಪೋದ್ಘಾತ ಸಂಚಿಕೆ ಮತ್ತು ಸಂಭವಪರ್ವ ಇವುಗಳ ಅವತರಣಿಕೆಯಲ್ಲಿ ಪ್ರಾಯಿಕವಾಗಿ ಹೇಳಲ್ಪಟ್ಟಿವೆ, ಆದುದರಿಂದ ಈ ಪುಸ್ತಕದಲ್ಲಿ ಅಡಗಿರುವ ಗ್ರಂಥಕ್ಕೆ ಸಂಬಂಧಿಸಿದ ವಿಶೇಷವಿಷಯಗಳನ್ನು ಮಾತ್ರ ಬರೆವುದು ಈಗ ಆವಶ್ಯಕವಾಗಿದೆ.

ಈ ಪುಸ್ತಕದಲ್ಲಿ ಆರಣ್ಯಕಪರ್ವ 1, ಕಿಮ್ಮೀರವಧಪರ್ವ 2, ಅರ್ಜುನಾಭಿಗಮನಪರ್ವ 3, ಕೈರಾತಪರ್ವ 4, ಇಂದ್ರಲೋಕಾಭಿಗಮನಪರ್ವ 5, ತೀರ್ಥಯಾತ್ರಾಪರ್ವ 6, ಜಟಾಸುರವಧಪರ್ವ 7, ನಿವಾತಕವಚಯುದ್ಧಪರ್ವ 8, ಆಜಗರಪರ್ವ 9, ಮಾರ್ಕಂಡೇಯಸಮಾಖ್ಯಾಪರ್ವ 10, ದ್ರೌಪದೀಸತ್ಯಭಾಮಾಸಂವಾದಪರ್ವ 11, ಘೋಷಯಾತ್ರಾಪರ್ವ 12, ಕುಂಡಲಾಹರಣಪರ್ವ 13, ದ್ರೌಪದೀಹರಣಪರ್ವ 14, ಆರಣೇಯಪರ್ವ 15, ಎಂದು ಹದಿನೈದುಪರ್ವಗಳು ಅಡಗಿವೆ.

ಈ ಅರಣ್ಯಪರ್ವದಲ್ಲಿ ಚ. ಡ. ಛ. ಗುರ್ತುಗಳುಳ್ಳ ಪುಸ್ತಕಗಳಲ್ಲಿ 3—4 17·23·25 ಈ ಸಂಧಿಗಳು ಇರುವುದಿಲ್ಲ. ಆದರೂ ಖ. ಝ. ಗ, ಗುರ್ತುಗಳುಳ್ಳ ಪುಸ್ತಕಗಳಲ್ಲಿ ಮೇಲೆ ಕಂಡ ಸಂಧಿಗಳು ಕಂಡು ಬಂದುದರಿಂದ ಅವುಗಳು ಉಪೇಕ್ಷೆಗೆ ಅರ್ಹವಲ್ಲವೆಂದು ಭಾವಿಸಿ ಈ ಪುಸ್ತಕದಲ್ಲಿ ಮುದ್ರಿಸಲ್ಪಟ್ಟವು.

ಈ ಗ್ರಂಥಕಾರನ ವಿಷಯದಲ್ಲಿ ಹೇಳಬೇಕಾದ ವಿಷಯಗಳು ಪ್ರಾಯಿಕವಾಗಿ 1ನೆಯ ಸಂಚಿಕೆಯ ಅವತರಣಿಕೆಯಲ್ಲಿ ನಿರೂಪಿಸಲ್ಪ

ಟ್ಟಿವೆ. ಆದರೆ ಅರಣ್ಯಪರ್ವದ 7ನೆಯ ಸಂಧಿಯಲ್ಲಿ ಕೆಲವು ಪದ್ಯಗಳನ್ನು ಸಾವಧಾನವಾಗಿ ಪರಾಮರ್ಶಿಸಿದರೆ, ಈ ಕವಿಯನ್ನು ಶಿವಭಕ್ತನಾದ ಅದ್ವೈತಿ ಎಂದು ನಿರ್ಧರಿಸಬಹುದೆಂಬ ಕೆಲವರ ಅಭಿಪ್ರಾಯವನ್ನು ಅರಣ್ಯಪರ್ವದಲ್ಲಿಯೇ ವಿಚಾರಮಾಡುವುವೆಂದು ಹೇಳಿದ್ದೆವಷ್ಟೆ ಆಪ್ರಕಾರ ಸ್ವಲ್ಪ ವಿಚಾರವು ಮಾಡಲ್ಪಡುತ್ತದೆ. ಈ ಗ್ರಂಥಕರ್ತನು ಶಿವಭಕ್ತನಾದ ಅದ್ವೈತಿಯೆಂದು ಹೇಳುವುದಕ್ಕೆ ಅನುಕೂಲವಾಗಿ ತೋರುವ 7ನೆ ಸಂಧಿಯಲ್ಲಿರುವ ಪದ್ಯಗಳು.

"ಆವನನು ಜೀವಾತ್ಮಚೈತ
ನ್ಯಾವಲಂಬನದಲ್ಲಿ ಈಶ್ವರ
ನಾವನೀತನೊಳಮಗೆ ತೋಟಿಯೆ ಶಿವ ಶಿವಾ ಯೆಂದ ॥ ೭—೫೫

"ಲೋಕರಚನಾ ರಕ್ಷೆ ಸಂಪ್ರತಿ
ವ್ಯಾಕರಣೆ ತಾನಾರಧೀಜಗ
ದೇಕದೈವದ ಕೂಡೆ ತೋಟಿಯೆ ಶಿವ ಶಿವಾ ಯೆಂದ ॥ ೭—೫೬

"ಅವನೊಬ್ಬನಣೋರಣೀಯನ
ದಾವನುರುಮಹತೋಮಹೀಯನ
ದಾವ ನುರುಂತರ ॥ ೭—೬೩

"ಸರಸಿಜಾಸನ ವಿಷ್ಣು ರುದ್ರೇ
ಶ್ವರಸದಾಶಿವರಾವಳೊಬ್ಬಳ
ಚರಣಸೇವಾಸಂಗದಲ್ಲಿಯೆ ಸುಪ್ರತಿಷ್ಠಿತರು ।
ಪರಮ ಶಕ್ತಿಯದಾವನಂಘ್ರಿಗೆ
ಶಿರವನೊಡ್ಡುವಳಾ ಪರಾತ್ಪರ
ಪರಮಶಿವನಲಿ ಸೆಣಸಿದೆವಲಾ ಶಿವ ಶಿವಾ ಯೆಂದ" ೭—೬೬

ಇವೇ ಮೊದಲಾದ ಪದ್ಯಗಳು ಅರ್ಜುನನು ಕಿರಾತರೂಪಿಯಾದ ಶಿವನೊಡನೆ ಯುದ್ಧವನ್ನು ಮಾಡಿ ಆ ಕಿರಾತನು ಶಿವನೆಂದು ವ್ಯಕ್ತವಾ

ಗಲು ತಾನು ಮಾಡಿದ ಕಾರ್ಯವು ಅನುಚಿತವೆಂದು ಚಿಂತಿಸುವ ರೀತಿಯನ್ನು ಹೇಳುತ್ತವೆ. ಈ ಸಂದರ್ಭವನ್ನು ಚನ್ನಾಗಿ ಬುದ್ಧಿವಂತರು ಪರಿಭಾವಿಸಿದರೆ ಈ ಪದ್ಯಗಳು ಮೇಲೆ ಹೇಳಿದ ಅಭಿಪ್ರಾಯಕ್ಕೆ ಸಾಧಕವೆಂದು ಹೇಳಲವಕಾಶವಿರುವುದಿಲ್ಲ.

ಹೇಗೆಂದರೆ—ಈ ಶ್ಲೋಕಗಳು ಅರ್ಜುನನು ಚಿಂತಿಸಿದ ರೀತಿಯನ್ನು ತಿಳಿಸುತ್ತವೆಯೇ ಹೊರತು ಗ್ರಂಥಕಾರನ ಮತವನ್ನು ತಿಳಿಸುವುವಲ್ಲ. ಅರ್ಜುನನು ಮಹಾಜ್ಞಾನಿಯೆಂದು ಸರ್ವಸಮ್ಮತನಾದುದರಿಂದ ಅರ್ಜುನನ ಮತವು ದ್ವೈತಾ ದ್ವೈತಾದಿಮತಗಳಲ್ಲಿ ಒಂದೆಂದು ನಿಶ್ಚಯಿಸುವುದು ಶಕ್ಯವಲ್ಲ. ಈ ಪ್ರಕರಣದಲ್ಲಿ ಅರ್ಜುನನು ಶಿವಭಕ್ತಿಯನ್ನು ತೋರಿಸಿದಂತೆ ಸ್ಥಳಾಂತರಗಳಲ್ಲಿ ವಿಷ್ಣುಭಕ್ತಿಯನ್ನು ಇನ್ನು ಹೆಚ್ಚಾಗಿ ವ್ಯಕ್ತಪಡಿಸಿದಂತೆ ಪ್ರತಿಪಾದಿಸುವ ವಚನಗಳು ದೊರೆಯುತ್ತವೆ. ಅರ್ಜುನನ ಮತವು ಯಾವುದಾದರೂ ಆಗಲಿ ಕವಿಯ ಮತವು ಅರ್ಜುನನ ಮತವೇ ಯೆಂದು ಹೇಳುವುದಕ್ಕೆ ಸಾಧಕವೇ ಇಲ್ಲವಾದುದರಿಂದ, ಈ ವಚನಗಳಿಂದ ಕವಿಯ ಮತದ ನಿಶ್ಚಯವಾಗುವುದಿಲ್ಲ. ಮತ್ತು ಅರ್ಜುನನು ಶ್ರೀಕೃಷ್ಣಪ್ರೇರಣಾನುಸಾರವಾಗಿ ಪಾಶುಪತಾಸ್ತ್ರವನ್ನು ಸಂಪಾದಿಸಲು ಶಿವಸನ್ನಿಧಿಗೆ ಬಂದು ಶಿವಾರ್ಚನೆಯನ್ನು ಮಾಡಿದಾಗ ಈ ಸಂಭವವು ಉಂಟಾಯಿತಲ್ಲವೆ ? ಫಲಕಾಮನೆಯಿಂದ ಆರಾಧನೆಯನ್ನು ಮಾಡತಕ್ಕವನು ತನ್ನಿಂದ ಆರಾಧಿಸಲ್ಪಡುವ ದೇವತೆಗೆ ಸಂತೋಷಕರವಾದ ಧ್ಯಾನಸ್ತುತಿಮೊದಲಾದುದನ್ನು ಮಾಡುವುದು ಸಹಜವಲ್ಲವೆ ? ಆದರೆ ಅದ್ವೈತಮತಪ್ರಕಾರವಾಗಿ ಧ್ಯಾನಕಾಲದಲ್ಲಿ ತೋರುವ ಧರ್ಮಗಳೆಲ್ಲವೂ ಆರೋಪಿತವಾದುದರಿಂದ ಶಿವನಲ್ಲಿ ಸರ್ವೋತ್ತಮತ್ವಾದಿಗಳನ್ನು ಫಲಾರ್ಥವಾಗಿ ಆರೋಪಿಸಿ ಅರ್ಜುನನು ಉಪಾಸಿಸಿದನೆಂದು ಹೇಳಬಹುದಾಗಿದೆ. ಆದುದರಿಂದ ಈ ಪದ್ಯಗಳು ತತ್ತ್ವವನ್ನು ತಿಳಿಸುವುವಲ್ಲ ಅಲ್ಲದೆ ಅರ್ಜುನನು ಮತ್ತು ಇತರಪಾಂಡವರು ಸರ್ವದಾ ಶ್ರೀಕೃಷ್ಣನನ್ನೇ ಪರದೇವತೆಯೆಂದು ನಂಬಿದವರೆಂಬುದು ಇದೇ ಗ್ರಂಥದಲ್ಲಿ ಅನೇಕ ಭಾಗಗಳಲ್ಲಿಯೂ ಮತ್ತು ಭಗವದ್ಗೀತೆಯಲ್ಲಿಯೂ ಅತ್ಯಂತ ಸ್ಪಷ್ಟವಾಗಿರುತ್ತದೆ.

ಇದರಿಂದ ಶಿವಸರ್ವೋತ್ತಮತ್ವವು ಅರ್ಜುನನ ಮತವೇ ಅಲ್ಲದಾಗಿರುವಾಗ ಅರ್ಜುನನ ಧ್ಯಾನಪ್ರಕಾರವನ್ನು ಅನುವದಿಸುವ ಗ್ರಂಥಕಾರನು ಆ ಮತದವನೆಂದು ಹೇಳುವುದು ಸಕಾರಣವಾಗಿರುವುದಿಲ್ಲ.

ಹೀಗೆಯೇ ಶಿವನನ್ನು ಸಮೀಪಿಸಿದಾಗ ಅರ್ಜುನನ ಅಪರಾಧಕ್ಷಮಾಪನಪೂರ್ವಕವಾದ ಶಿವಸ್ತುತಿವಾಕ್ಯಗಳು ಕೂಡ ಗ್ರಂಥಕಾರನ ಮತವನ್ನು ತಿಳಿಸುವುದಕ್ಕೆ ಅನುಕೂಲವಲ್ಲ ವಾಸ್ತವವಾಗಿ ಮೂಲಭಾರತದಲ್ಲಿ ಈ ಪ್ರಕರಣದಲ್ಲಿ ಕಂಡು ಬರುವ ಕೆಲವು ಶ್ಲೋಕಗಳ ಅಭಿಪ್ರಾಯವನ್ನು ತಿಳಿಸುವ ವಾಕ್ಯಗಳು ಕರ್ಣಾಟಕ ಭಾರತದಲ್ಲಿ ಈ ಪ್ರಕರಣದಲ್ಲಿ ಕಂಡುಬರುವುದಿಲ್ಲ. ಕೆಲವು ಅಭಿಪ್ರಾಯಗಳಿಗೆ ಸಂವಾದಿಯಾದ ವಾಕ್ಯಗಳು ಕಂಡುಬಂದರೂ ಆ ವಾಕ್ಯಗಳು ಸರ್ವಮತದವರೂ ತಮ್ಮ ತಮ್ಮ ಮತಾನುಸಾರವಾಗಿ ಹೊಂದಿಕೆಮಾಡಿಕೊಳ್ಳಲು ತಕ್ಕುವಾಗಿವೆ. ಆದುದರಿಂದ ಇಲ್ಲಿರುವ ವಾಕ್ಯಗಳು ಕೂಡ ಮೂಲಭಾರತದಲ್ಲಿರುವ ವಾಕ್ಯಗಳಂತೆ ಸರ್ವಮತಗಳಿಗೂ ಅನುಕೂಲವಾಗತಕ್ಕವುಗಳಾಗಿವೆ. ಮೂಲಭಾರತದಲ್ಲಿಲ್ಲದ ಅಭಿಪ್ರಾಯಗಳನ್ನು ತಿಳಿಸುವ ವಾಕ್ಯಗಳು ಮತಾಭಿಮಾನಿಗಳಿಂದ ಸೇರಿಸಲ್ಪಟ್ಟವೆಂದಾಗಲಿ ಇತರ ಮತಗಳಿಗನುಕೂಲವಾದ ವಾಕ್ಯಗಳು ಗ್ರಂಥದಿಂದ ತೆಗೆದು ಹಾಕಲ್ಪಟ್ಟವೆಯೆಂದಾಗಲಿ ಹೇಳಬಹುದಾಗಿದೆ. ಆದುದರಿಂದ ಇಷ್ಟುಮಾತ್ರದಿಂದೇ ಗ್ರಂಥಕಾರನ ಮತನಿರ್ಣಯವು ಆಗುವುದಿಲ್ಲ.

ಅಲ್ಲದೆ ಮೊದಲನೆಯ ಸಂಪುಟದ ಅವತರಣಿಕೆಯಲ್ಲಿ ಗ್ರಂಥಕಾರನು ಇಂತಹ ಮತದವನೆಂಬುದನ್ನು ನಿರ್ಣಯಿಸುವುದಕ್ಕೆ ಸಾಧಕಗಳೆಂದು ನಾವು ತೋರಿಸಿರುವ ಆದ್ಯಂತಗಳಲ್ಲಿ ವೀರನಾರಾಯಣನಾಮಾಂಕನಾದಿಗಳೇ ಸಾಧಕಗಳೆಂದು ತಿಳಿವುದುಚಿತವೆಂದು ಹೇಳಬಹುದಾಗಿದೆ.

ಇದೇ ವಿಷಯದಲ್ಲಿ ಅದ್ವೈತಮತದ ತತ್ವವನ್ನು ಅರಿತು ವಿಚಾರ ಮಾಡಿದರೆ ಆ ಮತದ ಪ್ರಕಾರ ಶೈವವೈಷ್ಣವ ವಿಭಾಗವು ಅನಾವಶ್ಯಕ

ವೆಂಬುವು ಮೊದಲಾದುವನ್ನು ಅಮೃತ ರಹಸ್ಯವ್ಯಕ್ತಿ ಪೂರ್ವಕವಾಗಿ ತಿಳಿಸಿದರೆ ಸರ್ವಜನರಿಗೂ ಗ್ರಾಹ್ಯವಾಗಲಾರದೆಂದು ಸಂಕ್ಷೇಪಿಸಲ್ಪಟ್ಟಿದೆ.

ಇದರ ಶೋಧನಕ್ಕಾಗಿ ಉಪಯೋಗಿಸಿರುವ ಪುಸ್ತಕಗಳ ವಿವರಣೆ.

| ಗುರ್ತು | ಗ॥ ಓ॥ | ಲೈಬ್ರರಿ ನಂಬರು | ವಿಶೇಷ. |
|---|---|---|---|
| ಕ. | ನಂ॥ | 70 | ಸಮಗ್ರ. |
| ಖ | ,, | ,, | ಸಮಗ್ರ ಕೌರ್ಟಪ್ರಸ್ ಪ್ರೊ ಪ್ರೈಟರಾದ ಮ॥ ಮಾಧ ವ್ವನವರಿಂದ ಬಂದದ್ದು. |
| ಗ | ,, | 251 | ಸಮಗ್ರ. |
| ಘ | ,, | 57 | ಅಸಮಗ್ರ. |
| ಜ | ,, | 2 | ಸಮಗ್ರ. |
| ಝ | ,, | 266 | ಅಸಮಗ್ರ. |
| ಟ | ,, | 205 | ಸಮಗ್ರ. |
| ಡ | ,, | 227 | ಸಮಗ್ರ. |

ಮೇಲೆ ತೋರಿಸಿದ ಪುಸ್ತಕಗಳೊಳಗೆ ಅನೇಕ ಪುಸ್ತಕಗಳಲ್ಲಿ ಕಂಡು ಅತ್ಯಂತಸಂಗತವಾಗಿರುವುದನ್ನು ಪುಸ್ತಕಮಧ್ಯದಲ್ಲಿ ಸೇರಿಸಿ ಉಳಿದ ಏನೋ ಒಂದು ರೀತಿಯಾಗಿ ಹೊಂದಿಸಿಕೊಳ್ಳಬಹುದಾದ ಪುಸ್ತಕಾಂತರ ಪಾಠಗಳನ್ನು ಆಯಾ ಪುಟದ ಕೆಳಗಡೆ ಆಯಾ ಪುಸ್ತಕದ ಗುರ್ತಿನೊಡನೆ ತೋರಿಸಿದೆ. ಪ್ರಾಯಿಕವಾಗಿ ನಿರ್ಮೂಲವಾಗಿಯೂ ಅನಾವಶ್ಯಕವಾಗಿಯೂ ಯಾವ ಶೋಧನೆಯೂ ಮಾಡಲ್ಪಟ್ಟಿರುವುದಿಲ್ಲ. ಇದರ ಮೇಲೂ ಪ್ರಾಮಾದಿಕ ದೋಷಗಳೇನಾದರೂ ಇದ್ದರೆ ಗುಣಜ್ಞರು ಕ್ಷಮಿಸುವುದಕ್ಕೆ ಯೋಗ್ಯವಾಗಿರುವುದರಿಂದ ಗುಣಗ್ರಾಹಿಗಳು ಅಭಿಜ್ಞರೂ ಆದವರೆಲ್ಲರೂ ಸಂತೋಷಿಸುವರೆಂದು ನಂಬಿದೆ.

# ಶೋಧನ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 2 | 19 | ಧರ | ಧಾರ |
| 4 | 10 | ಬಟೆ | ಬಟಿ |
| 14 | 18 | ನಿಷ | ನಿಷ್ಟ |
| 15 | 19 | ವ್ಯೆ | ವ್ಯೈ |
| 16 | 9 | ವ | ವೇ |
| 48 | 24 | ಗ್ರಾವೋ | ಗಾವ್ರೋ |
| 50 | 18 | ಚ್ರೌ | ಜ್ರೌ |
| 52 | 24 | ಲವೆ | ಲವ |
| 53 | 16 | ಬಿಂಗೆತ | ಬಿಂಗೆ |
| ,, | 17 | ದ್ಧಾ | ಧಾ |
| 56 | 15 | ವರ್ತಿ | ವತಿ |
| 67 | 9 | ಕರಣಾ | ಕರುಣಾ |
| 70 | 4 | ತಿಂಳ | ತಿಂಗಳ |
| 70 | 16 | ಭ್ರಮಸು | ಭ್ರಮಿಸು |
| 70 | 23 | ಕವು | ಕ್ರವು |
| 142 | 6 | ಕೇಳ | ಖೇಳ |
| 143 | 12 | ಬಾಲ | ಚಾಲಿ |
| 146 | 10 | ದೇವಿ | ದೇವ |
| 153 | 7 | ನಲೆದೊ | ನಲೆದ |
| 158 | 24 | ಖಮತ | ಖಮತು |
| 169 | 1 | ಭೀವ | ಭೀವು |
| 180 | 13 | ಹೊಗ | ಹೋಗ |
| 180 | 13 | ಭೀನು | ಭೀವು |

| ಪುಟ | ಪಙ್ತಿ | ಅಶುದ್ಧ | ಶುದ್ಧ |
| --- | --- | --- | --- |
| 211 | 13 | ರತ | ತರ |
| 214 | 24 | ಸಕಂ | ಸಕ್ಕಂ |
| 224 | 13 | ತೆಯಾರು | ಕನಾರು |
| 225 | 7 | ನಿಂದ್ಯದ | ನಿಂದ್ಯರ |
| 261 | 5 | ತುಷ್ಟ | ತುಷ್ಟಿ |
| 284 | 15 | ಹಾಯು | ಹಾಯ್ದು |
| 286 | 20 | ಮುದುಡೇ | ಮುಱಿದುಡೇ |
| 315 | 14 | ಗಿದ | ಗಿದು |
| 328 | 21 | ಗಳು | ಗಳ |
| 364 | 9 | ವಿವಲ | ವಿಮಲ |

# ವಿಷಯ ಸೂಚಿಕೆ.

| ವಿಷಯ | ಪುಟ |
|---|---|

ಂನೆಯ ಸಂಧಿ—


ಪಾಂಡವರು ಗಂಗೆಯನ್ನು ದಾಟಿ ಉತ್ತರತೀರದಲ್ಲಿ ಇರುವಿಕೆ .... 1
ರಾಯನನ್ನು ಪುರಜನಗಳು ಹಿಂಬಾಲಿಸಿದುದು .... 2
ಧರ್ಮರಾಯನ ಚಿಂತೆ .... .... ,,
ಜನಗಳು ರಾಯನನ್ನು ಸ್ತುತಿಸುವಿಕೆ .... .... ,,
ಧೌಮ್ಯರು ಸೂರ್ಯನನ್ನು ಪ್ರಾರ್ಥಿಸೆಂದು ಹೇಳುವಿಕೆ .... 3
ಧರ್ಮರಾಯನ ಸೂರ್ಯಪ್ರಾರ್ಥನೆ .... .... ,,
ಸೂರ್ಯನು ಪಾಂಡವರಿಗೆ ಅಕ್ಷಯ ಪಾತ್ರವನ್ನು ಕೊಟ್ಟದು 4
ಇತ್ತ ಮೈತ್ರೇಯನು ದುರ್ಯೋಧನನನ್ನು ನೋಡುವಿಕೆ .... ,,
ಮೈತ್ರೇಯನು ಪಾಂಡವರಿಗೆ ರಾಜ್ಯವನ್ನು ಕೊಡು ಎಂದು ಹೇಳಿದುದು .... .... 5
ಮೈತ್ರೇಯನು ತನ್ನ ಮಾತನ್ನೊಪ್ಪದಿರಲು ಶಾಪವನ್ನು ಕೊಡುವಿಕೆ .... .... .... ,,
ಮೈತ್ರೇಯನ ಮಾತನ್ನು ವಿದುರನು ಒಪ್ಪಲು ವಿದುರನನ್ನು ಧಿಕ್ಕರಿಸಿದುದು .... ... .... 6
ಕಾಮ್ಯಕವನವನ್ನು ಕುರಿತು ವಿದುರನ ಗಮನ .... ,,
ಧೃತರಾಷ್ಟ್ರನು ವಿದುರನನ್ನು ಕರೆಕಳುಹಿಸಿದುದು .... 7
ಪಾಂಡವರ ಸ್ಥಿತಿಯನ್ನು ಕೇಳುವಿಕೆ .... .... ,,
ಕಾಮ್ಯಕವನಕೆ ಬರಲು ಕಿರ್ಮ್ಮೀರನು ದಾರಿಗೆ ಅಡ್ಡ ಕಟ್ಟಿದುದು .... 8
ಆಗ ಪಾಂಡವರ ಭಯ .... .... .... 9
ದೈತ್ಯನ ಘೋರವಾದ ಧ್ವನಿ .... .... ,,
ಪಾಂಡವಕಿರ್ಮ್ಮೀರರ ಸಂವಾದ .... .... ,,
ಭೀಮನ ಪರಾಕ್ರಮವಾಕ್ಯ .... .... 10

| ವಿಷಯ | ಪುಟ |
|---|---|
| ದೈತ್ಯನ ಪರಾಕ್ರಮವಾಕ್ಯ .... .... | 10 |
| ಯುದ್ಧ ಜರುಗಿದ ಕ್ರಮ .... .... .... | 11 |
| ಕಿರ್ಮ್ಮೀರನ ಮರಣ .... .... .... | ,, |

೨ನೆಯ ಸಂಧಿ—

| | |
|---|---|
| ಪಾಂಡವರ ವರ್ತಮಾನವನ್ನು ಕೇಳಿ ಕೃಷ್ಣನು ಇವರೆಡ್ಡೆಗೆ ಬಂದುದು .... .... .... | 12 |
| ಆಗ ಅನೇಕರಾಜರ ಆಗಮನ .... .... | 13 |
| ಪಾಂಡವರು ಸರ್ವರನ್ನು ಆದರಿಸಿದುದು .... .... | 14 |
| ದ್ರೌಪದಿಯು ಶ್ರೀಕೃಷ್ಣನ ಪಾದದ ಮೇಲೆ ಬಿದ್ದುದು .... | 15 |
| ಶ್ರೀಕೃಷ್ಣಸ್ತುತಿ .... .... .... | ,, |
| ದ್ರೌಪದಿಗೆ ಶ್ರೀಕೃಷ್ಣನ ಸಮಾಧಾನ .... .... | 17 |
| ನಿಮ್ಮಗೆ ತೊಂದರೆ ಬಂದಾಗ ನಾನು ದ್ವಾರಕೆಯಲ್ಲಿರಲಿಲ್ಲವೆಂದು ಶ್ರೀಕೃಷ್ಣನ ವಾಕ್ಯ .... .... .... | 18 |
| ಸಾಳ್ವಪುರಿಗೆ ಯುದ್ಧಕ್ಕೆ ಹೋದಸಂಗತಿಯನ್ನು ಹೇಳಿದುದು .... | 19 |
| ಆಗ ಜೂಜು ನಿಮ್ಮಲ್ಲಿ ಸಂಭವಿಸಿತೆಂದು ಶ್ರೀಕೃಷ್ಣನ ವಚನ .... | 20 |
| ದ್ರೌಪದಿಯು ಮಾಡಿದ ಶ್ರೀಕೃಷ್ಣಸ್ತುತಿ .... | ,, |
| ನಿನ್ನ ಪ್ರತಿಜ್ಞೆಯನ್ನು ನಡೆಸಿಕೊಡುವೆನೆಂದು ಶ್ರೀಕೃಷ್ಣನ ವಚನ .... .... .... | ,, |
| ವನದಲ್ಲಿ ಕೆಲವು ಕಾಲವನ್ನು ಕಳೆಯಬೇಕೆಂದು ಹೇಳುವಿಕೆ .... | 21 |
| ಪಾಂಡವರು ಹೆಂಡರು ಮಕ್ಕಳನ್ನು ಅವರವರ ತೌರುಮನೆಗಳಿಗೆ ಕಳುಹಿದುದು .... .... .... | ,, |

೩ನೆಯ ಸಂಧಿ—

| | |
|---|---|
| ಪಾಂಡವರ ಪ್ರಾರ್ಥನೆಯಂತೆ ಇನ್ನೊಂದು ದಿವಸ ಶ್ರೀಕೃಷ್ಣನು ಇರುವಿಕೆ .... .... .... | 22 |
| ಆಗ ಪಾಂಡುರಾಯರ ಶ್ರಾದ್ಧ ನಡೆದ ಕ್ರಮ .... .... | 23 |
| ಭೀಮಸೇನನ ಮಾತಿಗೆ ಜೈಮಿನಿಯು ಚಿಂತೆ .... | 25 |

| ವಿಷಯ | | ಪುಟ |
|---|---|---|
| ಆಗ ಭೀಮಸೇನನು ಶ್ರೀಕೃಷ್ಣನ ಅಪ್ಪಣೆಯಂತೆ ತಮ್ಮನ್ನು ಕರೆದುದು ಯೆಂದು ಹೇಳುವಿಕೆ | .... | 25 |
| ಜೈಮಿನಿಯು ಧರ್ಮರಾಯನನ್ನು ಸ್ತುತಿಸುವಿಕೆ | ... | 26 |
| ಭೀಮನ ಆಗಮನ | .... ... | 27 |
| ಶ್ರೀಕೃಷ್ಣನು ಜೈಮಿನಿಯ ಅಭಿಪ್ರಾಯವನ್ನು ಕೇಳಿದುದು | ... | ,, |
| ಮುನಿಯ ಅಸಮಾಧಾನವನ್ನು ಹೇಳಿದುದು | ... | 28 |
| ಅಸಮಾಧಾನಕ್ಕೆ ಕಾರಣವನ್ನು ಹೇಳೆಂದು ಶ್ರೀಕೃಷ್ಣನನ್ನು ಕುರಿತು ಪ್ರಾರ್ಥನೆ | .... .... | 29 |
| ಆಗ ಕೃಷ್ಣನ ಧರ್ಮೋಪದೇಶ | .... .... | ,, |
| ಧರ್ಮರಾಯನನ್ನು ಕುರಿತು ಜೈಮಿನಿಯ ಸ್ತುತಿ | .... | 32 |
| ಜೈಮಿನಿಯು ಶ್ರೀಕೃಷ್ಣನನ್ನು ನಮಸ್ಕರಿಸಿದುದು | .... | ,, |
| ಆಗ ಜೈಮಿನಿಗೆ ಶ್ರೀಕೃಷ್ಣನ ಆದರ | .... .... | ,, |
| ಪಿತೃಯಾಗವನ್ನಾರಂಭಿಸೆಂದು ಶ್ರೀಕೃಷ್ಣನ ಆಜ್ಞೆ | .... | ,, |
| ಯಾಗ ಕ್ರಮ | .... .... .... | 34 |
| ಪಿತೃಯಾಗದಿಂದ ಪಿತೃಗಳಿಗೆ ಆಗುವ ತೃಪ್ತಿಕ್ರಮ | .... | ,, |
| ಜೈಮಿನಿಯು ಸಂತೋಷಪಟ್ಟು ಪಾಂಡವರನ್ನು ಆಶೀರ್ವದಿಸುವಿಕೆ | .... .... .... | 35 |
| ಆಗ ದ್ರೌಪದಿಯು ಶ್ರೀಕೃಷ್ಣನ ಪಾದದ ಮೇಲೆ ಬಿದ್ದು ಪ್ರಾರ್ಥಿಸಿದುದು | .... .... .... | 36 |


೪ನೆಯ ಸಂಧಿ —


| | | |
|---|---|---|
| ಧರ್ಮರಾಯನು ಮುನಿಜನಗಳೊಡನೆ ವನದಲ್ಲಿ ಸಂಚರಿಸುವಿಕೆ | .... | 37 |
| ಆ ವನದ ವರ್ಣನೆ | .... .... | 37 |
| ಗಂಗಾತೀರದಲ್ಲಿಯೇ ಮಧುಮಾಸವನ್ನು ಕಳೆದುದು | .... | 39 |
| ಗ್ರೀಷ್ಮಋತುವು ಬರಲು ಜಂಬೂಫಲವನ್ನು ಕೊಡುವ ಇಚ್ಛೆ ಹುಟ್ಟಿದುದು | .... .... .... | ,, |
| ಆ ವನದಲ್ಲಿ ಭೀಮಸೇನನು ಬೇಟೆಯಾಡಿದುದು | .... | ,, |

| ವಿಷಯ | | | ಪುಟ |
|---|---|---|---|
| ಆಗ ಭೀಮಸೇನನಿಗೆ ದಾರಿಯಲ್ಲಿ ಒಂದು ವೃಕ್ಷವು ಕಣ್ಣಿಗೆ ಬೀಳುವಿಕೆ .... | .... | .... | 41 |
| ಆ ಜಂಬೂಫಲವನ್ನು ಕೊಯಿದುದು | .... | .... | ,, |
| ಆ ಜಂಬೂಫಲವನ್ನು ಸ್ಥಳಕ್ಕೆ ಸೇರಿಸಿದುದು | | .... | 51 |
| ಕಣ್ವಋಷಿಯು ತಪಸ್ಸಿನಿಂದೇಳುವಿಕೆ | .... | .... | 52 |
| ಆಗ ಆ ಮುನಿಗೆ ಶ್ರೀಕೃಷ್ಣ ದರ್ಶನ | .... | .... | ,, |
| ಆ ಹಣ್ಣನ್ನು ವಿಪ್ರರಿಗೆ ಕೊಟ್ಟುದು | .... | .... | 53 |
| ಶ್ರೀಕೃಷ್ಣನು ದ್ವಾರಕೆಗೆ ಹೋದುದು | .... | .... | 55 |

೫ನೆಯ ಸಂಧಿ—

| | | | |
|---|---|---|---|
| ಕಾಮ್ಯಕವನದ ಸಂಚಾರ | .... | .... | 56 |
| ದ್ವೈತವನ ಪ್ರವೇಶ .... | .... | .... | 57 |
| ದ್ರೌಪದೀಭೀಮಸೇನರ ಕೋಪ | .... | .... | ,, |
| ಧರ್ಮರಾಯನ ಸಮಾಧಾನ | .... | .... | ,, |
| ಆಗ ವೇದವ್ಯಾಸರ ಆಗಮನ | .... | .... | 58 |
| ಧರ್ಮರಾಯನ ಆದರ | .... | .... | ,, |
| ಮುನಿಗಳ ಆದರ .... | .... | .... | ,, |
| ವೇದವ್ಯಾಸರಿಗೂ ಪಾಂಡವರಿಗೂ ಸಂವಾದ | .... | .... | 59 |
| ವ್ಯಾಸರನ್ನು ಕುರಿತು ಮುನಿಗಳ ನುಡಿ | .... | .... | 60 |
| ವ್ಯಾಸರು ಧರ್ಮರಾಜನಿಗೆ ಮಂತ್ರೋಪದೇಶ ಮಾಡಿದುದು | | .... | 61 |
| ಅರ್ಜುನನು ಇಂದ್ರಕೀಲದಲ್ಲಿ ಈಶ್ವರನನ್ನು ಪ್ರಾರ್ಥಿಸಲೆಂದು ವ್ಯಾಸರ ಆಜ್ಞೆ .... | .... | .... | 62 |
| ವ್ಯಾಸರು ತಮ್ಮಾಶ್ರಮಕ್ಕೆ ಹೋಗುವಿಕೆ | .... | .... | ,, |
| ವ್ಯಾಸರ ಅಪ್ಪಣೆಯನ್ನು ಅರ್ಜುನನಿಗೆ ತಿಳಿಸುವಿಕೆ | | .... | ,, |
| ಆಗ ಆದ ಸುಶಕುನಗಳು | .... | .... | 65 |
| ಇಂದ್ರಕೀಲ ಪರ್ವತದ ಬಳಿಗೆ ಹೋದುದು | .... | .... | ,, |
| ಅದರ ಸಮೀಪದ ವನದ ವರ್ಣನೆ | .... | .... | ,, |

| ವಿಷಯ | | | ಪುಟ |
|---|---|---|---|
| ಇದು ಶಿವನ ಕ್ಷೇತ್ರವೆಂದು ಆಕಾಶವಾಣಿಯಾಗುವಿಕೆ | | .... | 67 |
| ವನಪ್ರವೇಶಮಾಡಿ ಅರ್ಜುನನ ತಪಸ್ಸು | .... | .... | ,, |
| ಇಂದ್ರನ ಆಗಮನ ಮತ್ತು ಸಂವಾದ | .... | .... | 68 |
| ಅರ್ಜುನನಿಗೆ ಇಂದ್ರನ ವರದಾನ | .... | .... | ,, |

೬ನೆಯ ಸಂಧಿ—

| | | | |
|---|---|---|---|
| ಅರ್ಜುನನು ಧ್ಯಾನವನ್ನು ಮಾಡಿದುದು | .... | .... | 69 |
| ಅರ್ಜುನನ ಧ್ಯಾನಕ್ರಮವನ್ನು ತಿಳಿದು ಋಷಿಗಳ ಅಸೂಯೆ | | .... | 72 |
| ಆಗ ವನದಲ್ಲಿದ್ದ ಮುನಿಗಳು ಅರ್ಜುನನ ತಪಸ್ಸನ್ನು ನೋಡಿ ಶಿವನನ್ನು ಮರೆಹೋದುದು | .... | .... | 73 |
| ಆಗ ಈಶ್ವರನು ಜ್ಞಾನದೃಷ್ಟಿಯಿಂದ ಅರ್ಜುನನೆಂದು ತಿಳಿದು ಮುನಿಗಳಿಗೆ ಅಭಯವನ್ನು ಕೊಟ್ಟುದು | .... | .... | 75 |
| ಬೇಟೆಗಾಗಿ ಸರ್ವರನ್ನೂ ಸಿದ್ಧಪಡಿಸೆಂದು ನಂದೀಶ್ವರನಿಗೆ ಶಿವನ ಅಪ್ಪಣೆ ಮತ್ತು ಡಂಗುರ | .... | .... | 76 |
| ಈಶ್ವರನು ಕಿರಾತವೇಷವನ್ನು ತಾಳಿದುದು | | .... | ,, |
| ಬಳಿಕ ಈಶ್ವರನ ಪರಿವಾರವೆಲ್ಲ ಕಿರಾತರ ರೂಪವನ್ನು ತಾಳಿದುದು .... | .... | .... | 77 |
| ಕಿರಾತವೇಷಿಯಾದ ಈಶ್ವರನು ಸಪರಿವಾರನಾಗಿ ಇಂದ್ರಕೀಲಕ್ಕೆ ಬಂದುದು .... | .... | .... | 79 |
| ಈ ರಭಸವನ್ನು ಮೂಕದಾನವನು ಕೇಳಿ ಹಂದಿಯ ರೂಪವನ್ನು ತಾಳಿ ಬಂದುದು .... | .... | .... | ,, |
| ಈಶ್ವರನ ಬಾಣದ ಏಟಿನಿಂದ ಧ್ವನಿಮಾಡುತ್ತಾ ಬಂದ ಹಂದಿಯನ್ನು ಪಾರ್ಥನು ನೋಡಿದುದು | .... | .... | 80 |
| ಪಾರ್ಥನ ಬಾಣದಿಂದ ಹಂದಿಯು ಮೃತವಾಗುವಿಕೆ | | .... | 81 |
| ಹಂದಿ ನನ್ನದು ನನ್ನದು ಯೆಂದು ಶಿವಾರ್ಜುನರ ವಿವಾದ | | .... | ,, |

೭ನೆಯ ಸಂಧಿ—

| | | | |
|---|---|---|---|
| ಕಿರಾತನನ್ನು ಕುರಿತು ಅರ್ಜುನನು ನಿನ್ನ ಯಜಮಾನನನ್ನು ಕರೆದು ತಾ ಎಂದು ಹೇಳಿದುದು | .... | .... | 82 |

| ವಿಷಯ | ಪುಟ |
|---|---|
| ಈಶ್ವರನು ನಕ್ಕು ಪಾರ್ವತಿಯ ಮುಂದೆ ಈತನ ಪರಾಕ್ರಮವನ್ನು ಹೇಳಿದುದು .... .... .... | 82 |
| ಅರ್ಜುನನ ಉಪೇಕ್ಷಾವಾಕ್ಯಗಳು .... .... | 83 |
| ಈಶ್ವರನ ವಾಕ್ಯ .... .... .... | ,, |
| ಅರ್ಜುನನು ನಾನು ಈಶ್ವರನ ಶಿಷ್ಯನೆಂದು ಹೇಳಿದುದು .... | ,, |
| ಅದಕ್ಕೆ ಈಶ್ವರನ ನುಡಿ .... .... | ,, |
| ಪಾರ್ಥನು ಕೋಪದಿಂದ ಬಾಣಗಳನ್ನು ಹಾಕಿದುದು .... | 84 |
| ಕೋಪದಿಂ ಬಂದ ವಿನಾಯಕಾದಿಗಳನ್ನು ಸಮಾಧಾನಪಡಿಸಿದುದು .... .... .... | 85 |
| ಈಶ್ವರಾರ್ಜುನರ ಪರಸ್ಪರಬಾಣವೃಷ್ಟಿ .... ... | ,, |
| ಅರ್ಜುನನ ಬಾಣಗಳು ಮುಗಿದರೂ ಉತ್ಸಾಹ ಏಕರೀತಿಯಾಗಿರುವಿಕೆ .... ... .... | 86 |
| ಅರ್ಜುನನ ಬಾಣಗಳನ್ನು ಈಶ್ವರನು ನುಂಗಿದುದು .... | ,, |
| ಆಗ ಅರ್ಜುನನ ಪರಿತಾಪ .... .... | 87 |
| ಅರ್ಜುನನು ಭಯಗೊಂಡುದು ... .... | ,, |
| ಬಾಹುಯುದ್ಧಕ್ಕಾಗಿ ಈಶ್ವರನನ್ನು ಕರೆದುದು .... | 88 |
| ಪಾರ್ವತಿಯ ಮುಂದೆ ಈತನ ತಪಸ್ಸಿನ ಕ್ರಮವನ್ನು ಹೇಳಿದುದು .... .... .... | ,, |
| ಪಾರ್ಥ ಮತ್ತು ಈಶ್ವರನ ಬಾಹುಯುದ್ಧ .... .... | 89 |
| ಅರ್ಜುನನು ಈಶ್ವರನನ್ನು ಬೇಡಿದುದು .... .... | 91 |
| ಅರ್ಜುನನನ್ನು ನೋಡಿ ಶಿವನ ಪಶ್ಚಾತ್ತಾಪ .... | ,, |
| ಅರ್ಜುನನ ಸಂತಾಪ .... .... .... | 92 |
| ತಿರುಗಿ ಶಿವನನ್ನು ಪ್ರಾರ್ಥಿಸಲಾರಂಭಿಸಿದುದು .... | 93 |
| ತಿರುಗಿ ಯುದ್ಧಕ್ಕೆ ಕರೆಯುವಾಗ ಶಿವನು ಪ್ರತ್ಯಕ್ಷವಾದುದು .... | 94 |
| ಯುದ್ಧ ಮಾಡಿದ್ದಕ್ಕಾಗಿ ಅರ್ಜುನನ ಪಶ್ಚಾತ್ತಾಪ .... | 95 |
| ಈಶ್ವರನು ತನ್ನ ರೂಪವನ್ನು ಅರ್ಜುನನಿಗೆ ತೋರಿಸಿದುದು .... | 99 |
| ಈಶ್ವರನ ರೂಪವನ್ನು ನೋಡಿ ಅರ್ಜುನನು ಬೆರಗಾದುದು .... | 102 |
| ಈಶ್ವರನನ್ನು ಕುರಿತು ಅರ್ಜುನನ ಪ್ರಾರ್ಥನೆ .... | ,, |

| ವಿಷಯ | ಪುಟ |
|---|---|
| ಈಶ್ವರನನ್ನು ಕುರಿತು ಪರಿಪರಿಯಾಗಿ ಅರ್ಜುನನ ಪ್ರಾರ್ಥನೆ .... | 105 |
| ಈಶ್ವರನು ಅರ್ಜುನನನ್ನು ಆದರಿಸಿದುದು .... | 106 |
| ಅರ್ಜುನನಿಗೆ ಈಶ್ವರನು ಖಡ್ಗಾದಿಗಳನ್ನು ಕೊಟ್ಟುದು .... | ,, |
| ಆಗ ಅರ್ಜುನನನ್ನು ಅಸ್ತ್ರಗಳನ್ನು ಬೇಡಿದುದು .... | 107 |
| ಈಶ್ವರನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ಕೊಟ್ಟುದು .... | ,, |
| ಆಗ ದೇವತೆಗಳ ಸಂತೋಷ .... .... | ,, |
| ಸ್ತುತಿಯಿಂದ ಸಂತುಷ್ಟಳಾದ ಗಿರಿಜೆಯು ಅರ್ಜುನನಿಗೆ ವರವನ್ನು ಕೊಡುವಿಕೆ .... .... .... | 108 |
| ಆಗ ಗಣೇಶ ಷಣ್ಮುಖರಿಂದ ಅಸ್ತ್ರಲಾಭ .... .... | 109 |
| ನಿನ್ನ ಕಾರ್ಯಗಳಿಗೋಸ್ಕರ ಹೋಗೆಂದು ಶಿವನ ಆಜ್ಞೆ .... | 110 |
| ಅರ್ಜುನನಿಗೆ ಈಶ್ವರನು ವರವನ್ನು ಕೊಟ್ಟುದು .... | ,, |
| ಬಳಿಕ ಈಶ್ವರನು ಕೈಲಾಸವನ್ನು ಕುರಿತು ತೆರಳಿದುದು .... | 111 |
| ಆಗ ಅರ್ಜುನನ ಪಶ್ಚಾತ್ತಾಪ .... ... | ,, |
| **ನೆಯ ಸಂಧಿ—** | |
| ಅರ್ಜುನನ ಯೋಚನೆ .... .... .... | 112 |
| ಅರ್ಜುನನ ಆಗಮನ ... .... .... | 113 |
| ಆಗ ಇಂದ್ರನು ಭೂಲೋಕಕ್ಕೆ ಬರುವಿಕೆ .... .... | ,, |
| ದಿಕ್ಪಾಲಕರು ಅರ್ಜುನನ್ನು ಉಪಚರಿಸಿದುದು .... | 114 |
| ಇಂದ್ರಾದಿಗಳು ಬಾಣಗಳನ್ನು ಕೊಟ್ಟುದು .... | ,, |
| ಅರ್ಜುನನಿಗೆ ಇಂದ್ರನ ಆದರ .... .... | ,, |
| ದಿಕ್ಪಾಲಕರು ಹೊರಟು ಹೋಗಲು ಮಾತಲಿಯು ಸರಥನಾಗಿ ಬಂದುದು .... .... .... | 115 |
| ಆ ರಥವನ್ನು ನೋಡಿ ಅರ್ಜುನನು ವಿಸ್ಮಿತನಾದುದು .... | 116 |
| ಮಾತಲಿಯು ಅರ್ಜುನನನ್ನು ಸ್ತುತಿಸುವಿಕೆ .... | ,, |
| ಅರ್ಜುನನು ಹೊರಡುವಾಗ ವನದಲ್ಲಿದ್ದವರನ್ನು ಆಜ್ಞೆ ಕೇಳಿದುದು .... .... .... | 117 |
| ಅರ್ಜುನನು ರಥದಲ್ಲಿ ಕುಳಿತ ಬಳಿಕ ರಥವನ್ನು ವೇಗದಿಂದ ಬಿಡುವಿಕೆ .... .... .... | ,, |

| ವಿಷಯ | | ಪುಟ |
|---|---|---|
| ಆಗ ಅರ್ಜುನನು ಭೂಗೋಳಖಗೋಳಗಳನ್ನು ಹೇಳೆಂದು ಕೇಳಿದುದು .... .... | .... | 118 |
| ಮಾತಲಿಯು ಭೂವಿಸ್ತಾರವನ್ನು ಹೇಳಿದುದು | .... | 119 |
| ಚತುರ್ಮುಖಬ್ರಹ್ಮನ ಪುರವರ್ಣನೆ .... | .... | 121 |
| ಅಲ್ಲಿ ಮೇಲಿಂದಿಳಿದು ಬರುವ ಗಂಗೆಯನ್ನು ವರ್ಣಿಸುವಿಕೆ | .... | ,, |
| ನಾನಾದಿಕ್ಕುಗಳಲ್ಲಿರುವ ಪರ್ವತವೃಕ್ಷನದನದೀವರ್ಣನೆ | .... | 122 |
| ವರ್ಷದಧಿಪತಿಗಳು .... .... | .... | 126 |
| ಶ್ರೀಪತಿಯ ನಗರ ಮತ್ತು ಅದರ ವರ್ಣನೆ | .... | 127 |
| ಅಷ್ಟದಿಕ್ಪಾಲಕರ ಪುರಗಳು .... | .... | 129 |
| ಸೂರ್ಯರಥ ಮತ್ತು ನಕ್ಷತ್ರಗಳ ಸ್ಥಿತಿ .... | .... | 130 |
| ಸೂರ್ಯಮೊದಲಾದುವುಗಳ ಗ್ರಹಸ್ಥಾನವು .... | ... | 131 |
| ಮಂದೇಹರೆಂಬ ದೈತ್ಯರ ವೃತ್ತಾಂತ .... | .... | 132 |
| ಭೂಲೋಕದಲ್ಲಿ ಪುಣ್ಯವನ್ನು ಮಾಡಿ ಸ್ವರ್ಗಕ್ಕೆ ಹೋದವರನ್ನು ತೋರಿಸಿದುದು .... | .... | 133 |
| ಪುರಾತನ ಚಕ್ರವರ್ತಿಗಳನ್ನು ತೋರಿಸಿದುದು | .... | 134 |
| ಅಮರಾವತಿಯನ್ನು ನೋಡೆಂದು ಮಾತ ಹೇಳಿದುದು | .... | 135 |
| ಅರ್ಜುನನು ಅಮರಾವತಿಯನ್ನು ಪ್ರವೇಶಿಸಿದುದು | ... | ,, |
| ಆಗ ಅರ್ಜುನನನ್ನು ಕಂಡು ಇಂದ್ರನು ತನ್ನ ಅರ್ಧಾಸನದಲ್ಲಿ ಕುಳಿಸಿದುದು .... .... | .... | 135 |
| ಆಗ ಅರ್ಜುನನನ್ನು ನೋಡಲು ಸರ್ವರು ಬಂದುದು | .... | 136 |
| ಆಗ ಸಭೆಯಲ್ಲಿ ಸ್ವೇಚ್ಛೆಯಾಗಿ ಬಂದವರನ್ನು ತಡೆದುದು | .... | 137 |
| ಆಗ ಊರ್ವಶಿ ಮೊದಲಾದವರು ಇಂದ್ರನ ಸಭೆಗೆ ಬಂದುದು | .... | ,, |
| ಆಗ ಅಲ್ಲಲ್ಲಿ ನಡೆದ ಗಾನನರ್ತನಾದಿಗಳ ವರ್ಣನೆ | .... | 138 |
| ಆಸಭೆಯಲ್ಲಿ ಊರ್ವಶಿಯನ್ನು ಅರ್ಜುನನು ನೋಡಿದುದು | .... | 139 |
| ಸಭೆಯ ಸಮಾಪ್ತಿ .... .... | .... | ,, |
| ಅರ್ಜುನನ ಬಳಿಗೆ ಊರ್ವಶಿಯನ್ನು ಕಳುಹಿಸೆಂದು ಇಂದ್ರನ ಅಪ್ಪಣೆ .... .... | .... | ,, |
| ಊರ್ವಶಿ ಮನೆಗೆ ಚಿತ್ರಸೇನನು ಬಂದುದು .... | .... | ,, |
| ಚಿತ್ರಸೇನನು ಇಂದ್ರನ ಅಪ್ಪಣೆಯನ್ನು ಹೇಳಿದುದು | .... | 140 |

ವಿಷಯ ಪುಟ

೯ನೆಯ ಸಂಧಿ—


ಊರ್ವಶಿಯು ಸಾವಿರಾರು ನರ್ತಕಿಯರನ್ನು ಕರೆಸಿದುದು .... 142
ಊರ್ವಶಿಯು ಅರ್ಜುನನ ಮನೆಗೆ ಬಂದುದು .... 144
ಊರ್ವಶಿಯ ಸಂಗಡ ಬಂದ ತರುಣಿಯರ ವರ್ಣನೆ .... „
ಊರ್ವಶಿಯು ಅರ್ಜುನನಿದ್ದ ಮನೆಗೆ ಬಂದುದು .... 145
ಆಗ ಅರ್ಜುನನು ಊರ್ವಶಿಗೆ ಮರ್ಯಾದೆ ಮಾಡಿದುದು .... 146
ಅರ್ಜುನನು ಊರ್ವಶಿಯನ್ನು ಕುರಿತು ಬಂದ ಕಾರಣವನ್ನು ಕೇಳಿದುದು .... .... .... 146
ಆಗ ಊರ್ವಶಿಯ ಚಿಂತೆ .... .... 147
ಅರ್ಜುನೋರ್ವಶಿಯರ ಸಂವಾದ ... .... „
ಆಗ ಊರ್ವಶಿಯು ಕೋಪದಿಂದ ಅರ್ಜುನನಿಗೆ ಶಾಪವನ್ನು ಕೊಟ್ಟುದು .... .... .... 151
ಆಗ ಅರ್ಜುನನು ಸುಮ್ಮನೆ ಚಿಂತೆ ಮಾಡಿದುದು .... 153
ಅರ್ಜುನನಿದ್ದ ಮನೆಗೆ ಇಂದ್ರನು ಬಂದು ಮಾತನಾಡಿದುದು .... 154
ಆಗ ಅರ್ಜುನನು ಸುಮ್ಮನೆ ಇರಲು ಇಂದ್ರನು ಸಮಾಧಾನವನ್ನು ಹೇಳಿದುದು .... .... .... „
ಇಂದ್ರನು ತನ್ನ ಮನೆಗೆ ಅರ್ಜುನನನ್ನು ಕರೆತಂದುದು .... 155
ಅಲ್ಲಿ ಅರ್ಜುನನಿಗೆ ಬಹುವಿಧಾಸ್ತ್ರಶಸ್ತ್ರಲಾಭ .... „


೧೦ನೆಯ ಸಂಧಿ—


ಅರ್ಜುನನ ವಿಷಯದಲ್ಲಿ ಧರ್ಮರಾಯನ ಚಿಂತೆ .... 156
ಇಂದ್ರನ ಮಾತಿನಂತೆ ಬಂದ ಲೋಮಶಋಷಿಗಳನ್ನು ಧರ್ಮರಾಯ ಉಪಚರಿಸಿದುದು .... .... „
ಅರ್ಜುನನ ವಾರ್ತೆಯನ್ನು ಕೇಳಿ ಸಂತೋಷಿಸಿ ತೀರ್ಥಯಾತ್ರೆಗೆ ಹೊರಡುವಿಕೆ .... .... .... 157
ಆಗ ಲೋಮಶರು ಮಹಾತ್ಮರ ಕಥೆಗಳನ್ನು ಹೇಳಿದುದು ... „
ಆಗ ಯುಧಿಷ್ಠಿರನು ಗಂಧಮಾಧನದ ಬಳಿಗೆ ಸಪರಿವಾರನಾಗಿ ಬಂದುದು .... .... .... 161

| ವಿಷಯ | ಪುಟ |
|---|---|
| ಅಲ್ಲಿಂದ ಹೊರಡಲಾಗಿ ದಾರಿಯಲ್ಲಿ ಮಳೆಯಿಂದ ಆದ ತೊಂದರೆ .... | 161 |
| ಆಗ ಮಳೆಯಲ್ಲಿ ತೊಂದರೆಪಟ್ಟು ಹಿಂದೆ ನಿಂತ ದ್ರೌಪದಿಯನ್ನು ಹುಡಕಿ ಆದರಿಸಿದುದು .... .... | 163 |
| ದ್ರೌಪದಿಯ ಆಗಿನ ಸ್ಥಿತಿಯನ್ನು ನೋಡಿ ಧರ್ಮರಾಯನ ವ್ಯಸನ .... | 164 |
| ಆಗ ಜನಗಳು ಶ್ರಾಂತರಾಗಿರುವುದನ್ನು ತಿಳಿದು ಘಟೋತ್ಕಚನನ್ನು ಸ್ಮರಿಸಲು ಆತನ ಆಗಮನ .... .... | 165 |
| ಆಗ ಘಟೋತ್ಕಚನು ಸರ್ವರನ್ನು ಬದರಿಕಾಶ್ರಮಕ್ಕೆ ಕರೆತಂದುದು .... .... .... | 166 |

೧೧ನೆಯ ಸಂಧಿ—

| | |
|---|---|
| ಆಗ ದ್ರೌಪದಿಯು ಸೌಗಂಧಿಕ ಪುಷ್ಪದ ವಾಸನೆಯನ್ನು ಅನುಭವಿಸಿ ವಿಸ್ಮಿತಳಾದುದು .... .... | 167 |
| ಆ ಪುಷ್ಪವನ್ನು ತರಲು ಭೀಮಸೇನನನ್ನು ಪ್ರಾರ್ಥಿಸಿದುದು .... | 168 |
| ಭೀಮಸೇನನು ಹೊರಟಾಗ ದಾರಿಯಲ್ಲಾದ ಚಿತ್ರಕಾರ್ಯಗಳು .... | 169 |
| ಆಗ ಭೀಮಸೇನನ ಧ್ವನಿಯಿಂದ ಹನುಮಂತನು ಆಲೋಚಿಸಿದುದು .... .... .... | 170 |
| ಆಗ ಹನುಮಂತನು ತನ್ನ ಬಾಲವನ್ನು ದೊಡ್ಡದಾಗಿ ಮಾಡಿ ದಾರಿಯಲ್ಲಿಟ್ಟುದು .... .... .... | 171 |
| ಭೀಮಸೇನನನ್ನು ಹನುಮಂತನು ನೀನಾರೆಂದು ಕೇಳಿದುದು .... | ,, |
| ಅದಕ್ಕೆ ಭೀಮಸೇನನ ಉತ್ತರ .... .... | ,, |
| ದಾರಿಯಲ್ಲಿಟ್ಟ ಬಾಲವನ್ನು ತೆಗೆಯೆಂದು ಹನುಮಂತನು ಕೇಳಿದುದು .... .... .... | 172 |
| ನೀವು ನೂಕಿಕೊಂಡು ಹೋಗಿರೆಂದು ಹನುಮಂತನ ಉತ್ತರ .... | ,, |
| ಎಷ್ಟು ಪ್ರಯತ್ನಮಾಡಿದರೂ ಬಾಲವು ಹಾಗೆ ಇರಲು ಭೀಮನ ಚಿಂತೆ .... .... .... | 173 |
| ಆಗ ಹನುಮಂತನನ್ನು ನೀನಾರೆಂದು ಕೇಳಿದುದು .... | ,, |
| ಹಾಗೆಯೇ ಹನುಮಂತನು ಕೇಳಿದುದು .... | 174 |
| ಭೀಮಸೇನನ ಉತ್ತರ .... .... .... | ,, |

| ವಿಷಯ | | | | ಪುಟ |
|---|---|---|---|---|
| ಹನುಮಂತನ ಉತ್ತರ | .... | .... | .... | 174 |
| ಆಗ ಹನುಮಂತನನ್ನು ಸ್ತುತಿಸಿದುದು | | .... | .... | 175 |
| ಭೀಮನ ಸ್ತುತಿ | .... | .... | .... | ,, |
| ಸಮುದ್ರತರಣದ ರೂಪವನ್ನು ತೋರಿಸೆಂದು ಭೀಮನ ಪ್ರಶ್ನೆ | | | .... | 176 |
| ಆ ರೂಪವನ್ನು ಭೀಮಸೇನನಿಗೆ ಹನುಮಂತನು ತೋರಿಸಿದುದು | | | .... | 177 |
| ಆ ರೂಪವನ್ನು ನೋಡಿ ಭೀಮಸೇನನು ಭೀತನಾದುದು | | | .... | 178 |
| ಹನುಮಂತನು ಪೂರ್ವರೂಪವನ್ನು ತಾಳಿದುದು | | | .... | ,, |
| ಸರೋವರ ದರ್ಶನ | .... | .... | .... | 179 |
| ಅಲ್ಲಿ ಕುಬೇರ ಪರಿವಾರಕ್ಕೂ ಭೀಮಸೇನನಿಗೂ ಸಂವಾದ | | | .... | ,, |
| ಆ ಭಟರು ಕುಬೇರನಲ್ಲಿಗೆ ಹೋಗಬಹುದೆಂದು ಭೀಮಸೇನನನ್ನು ಕಂಡು ಹೇಳಿದುದು | | .... | .... | 180 |
| ಭೀಮಸೇನನಿಗೂ ಕುಬೇರಭಟರಿಗೂ ಯುದ್ಧ | | | .... | 181 |
| ಆಗ ಭೀಮಸೇನನ ದಯೆ | | .... | .... | 182 |

೧೭ನೆಯ ಸಂಧಿ—

| | | | | |
|---|---|---|---|---|
| ಧರ್ಮರಾಯನ ಚಿಂತೆ | .... | .... | .... | 183 |
| ಧರ್ಮರಾಯನು ಭೀಮಸೇನನನ್ನು ನೋಡಿದುದು | | | .... | 184 |

೧೮ನೆಯ ಸಂಧಿ—

| | | | | |
|---|---|---|---|---|
| ಅರ್ಜುನನನ್ನು ಕುರಿತು ಇಂದ್ರನು ಸ್ವರ್ಗದ ತೊಂದರೆಯನ್ನು ಹೇಳಿದುದು | .... | .... | .... | 193 |
| ಇಂದ್ರನ ಅಪೇಕ್ಷೆಯಂತೆ ದೈತ್ಯರ ಮೇಲೆ ಯುದ್ಧಕ್ಕೆ ಹೊರಟುದು | .... | .... | .... | 195 |
| ಅಸುರರು ಯುದ್ಧಕ್ಕೋಸ್ಕರ ಸಿದ್ಧರಾದುದು | | | .... | 197 |
| ಅಸುರರು ಅರ್ಜುನನನ್ನು ಸ್ತುತಿಮಾಡಿದರೆಂದು ಹೇಳಿದುದು | | | .... | 199 |
| ಅಸುರರು ಹೆಚ್ಚಾಗಿ ಬಂದು ಮುತ್ತುವಿಕೆ | | | .... | 200 |
| ದೇವತೆಗಳ ಜಯ | .... | .... | .... | 201 |
| ಅಸುರರ ಜಯ | .... | .... | .... | ,, |

ವಿಷಯ — ಪುಟ

ದೇವಾಸುರರ ಅಸ್ತ್ರ ಯುದ್ಧ .... .... 202
ನಿವಾತಕವಚರ ಸಂಹಾರ .... .... .... 204
ಕಾಲಕೇಯರೊಡನೆ ಯುದ್ಧಮಾಡಿದುದು ... .... ,,
ಕಾಲಕೇಯರ ಪರಾಜಯ .... ... 206
ಶತ್ರುನಾಶವಾಗಲಾಗಿ ಸುರರು ಸುಖದಿಂದಿರುವಿಕೆ .... 207
ಅರ್ಜುನನು ಈ ವೃತ್ತಾಂತವನ್ನು ಹೇಳಿ ಇವೆಲ್ಲವೂ ತಮ್ಮ ಕೃಪಾಲಬ್ಧವೆಂದು ಹೇಳಿದುದು .... .... 208
ಧರ್ಮರಾಯನ ಸಂತೋಷವಚನಗಳು .... ,,

೧೪ನೆಯ ಸಂಧಿ—

ಬೇಟೆಯಾಡುವಾಗ ಮೃಗಗಳು ಇದ್ದ ಕ್ರಮ ... 217
ಭೀಮಸೇನನು ಸಿಂಹಾದಿಗಳನ್ನು ಕೊಂದುದು .... 218
ಆಗ ಒಂದು ಹಂದಿ ತಪ್ಪಿಸಿಕೊಂಡು ಅರಣ್ಯದಲ್ಲಿ ಓಡಿದುದು .... ,,
ಅದನ್ನು ಅಟ್ಟಿಕೊಂಡು ಹೋದಾಗ ಸರ್ಪವು ಭೀಮನನ್ನು ಹಿಡಿದುದು .... .... .... 218
ಅದನ್ನು ಬಿಡಿಸಲು ಮಾಡಿದ ಭೀಮನ ಪ್ರಯತ್ನ ವ್ಯರ್ಥವಾಗುವಿಕೆ .... ... .... 219
ಆಗ ಅಪಶಕುನಸೂಚನೆಯಿಂದ ಅರಣ್ಯಕ್ಕೆ ಧರ್ಮರಾಯನು ಬಂದುದು .... .... ... ,,
ವನದಲ್ಲಿ ಸರ್ಪಾಕ್ರಾಂತನಾದ ಭೀಮನ ದರ್ಶನ .... 220
ಅದಕ್ಕೋಸ್ಕರ ರಾಯನ ಚಿಂತೆ .... .... ,,
ಆ ಸರ್ಪವನ್ನು ಕುರಿತು ಧರ್ಮರಾಯನ ಪ್ರಶ್ನೆ .... 221
ಆಗ ಸರ್ಪದ ಉತ್ತರ .... .... ,,
ಧರ್ಮದ ವಿಷಯದಲ್ಲಿ ಸರ್ಪದ ಪ್ರಶ್ನೆ .... .... 223
ಧರ್ಮರಾಯನ ಉತ್ತರ .... .... ,,
ಸರ್ಪವು ತನ್ನ ವೃತ್ತಾಂತವೆಲ್ಲವನ್ನು ಧರ್ಮರಾಯನನ್ನು ಕುರಿತು ಹೇಳಿದುದು .... .... .... 226

೧೫ನೆಯ ಸಂಧಿ—

ಧರ್ಮಭೀಮರನ್ನು ಸಮಾಧಾನಗೊಳಿಸಿದುದು .... 229

ವಿಷಯ ಪುಟ

| ವಿಷಯ | | | ಪುಟ |
|---|---|---|---|
| ತಿರುಗಿ ಕಾಮ್ಯಕ ವನಕೆ ಬಂದುದು | ... | .... | 230 |
| ಶ್ರೀಕೃಷ್ಣನ ಆಗಮನ | .... | .... | 231 |
| ಕುಶಲಪ್ರಶ್ನೆ .... | .... | .... | 232 |
| ಧರ್ಮರಾಯನು ತಮ್ಮ ವೃತ್ತಾಂತವೆಲ್ಲವನ್ನು ಹೇಳಿದುದು | | .... | ,, |
| ಆಗ ನಾರದಮಾರ್ಕಂಡೇಯರು ಬಂದುದು | .... | .... | 233 |
| ಮಾರ್ಕಂಡೇಯರು ಧರ್ಮರಾಯನನ್ನು ಸ್ತುತಿಮಾಡಿದುದು | | .... | ,, |
| ಪ್ರಳಯಕಾಲದಲ್ಲಿ ನಡೆದ ಕ್ರಮವನ್ನು ಹೇಳಿದುದು | | .... | ,, |
| ಆಗ ಮಾರ್ಕಂಡೇಯರು ತನ್ನ ದುರವಸ್ಥೆಯನ್ನು ಹೇಳಿದುದು | | .... | 236 |
| ಆಗ ಬ್ರಹ್ಮಾಚ್ಯುತರ ಬಳಿಗೆ ಬ್ರಹ್ಮನು ಬಂದುದು | | .... | ,, |
| ಆಗ ಬ್ರಹ್ಮಾಚ್ಯುತರ ಸಂಭಾಷಣ | ... | .... | ,, |
| ತಿರುಗಿ ಸೃಷ್ಟಿ ಕ್ರಮ ನಿರೂಪಣ | .... | .... | 238 |
| ಚತುರ್ಯುಗಗಳ ಸ್ಥಿತಿ .. | .... | .... | 239 |
| ಅಲ್ಲಿ ಆಶ್ರಮಚತುಷ್ಟಯದ ಸ್ಥಿತಿ | .... | .... | 241 |
| **೧೬ನೆಯ ಸಂಧಿ—** | | | |
| ವಿಪ್ರನ ಕೋಪದಿಂದ ಪಕ್ಷಿಯ ಮೃತಿ | .... | .... | 242 |
| ಭಿಕ್ಷೆಯನ್ನಿಡುವವಳ ಉತ್ತರ | .... | .... | 243 |
| ಬಳಿಕ ತನ್ನ ವರ್ತಮಾನವನ್ನು ಹೇಳಿ ಧರ್ಮವ್ಯಾಧನ ಬಳಿಗೆ ಕಳುಹಿಸಿದುದು .... | .... | .... | 243 |
| ಧರ್ಮವ್ಯಾಧನ ಅಂಗಡಿ .... | .... | .... | 244 |
| ಆತನು ತನ್ನ ಚರಿತ್ರವನ್ನು ಹೇಳಿದುದು | .... | .... | 245 |
| ಆಗ ನಾರದಾದಿಗಳು ಧರ್ಮರಾಯನಿಗೆ ಸಮಾಧಾನವನ್ನು ಹೇಳಿ ಹೊರಡುವಿಕೆ | .... | .... | 247 |
| ದ್ರೌಪದೀಸತ್ಯಭಾಮೆಯರ ಸಂವಾದ | .... | .... | 248 |
| **೧೭ನೆಯ ಸಂಧಿ—** | | | |
| ಪಾಂಡವರು ದ್ವೈತವನದಲ್ಲಿ ವಾಸಮಾಡಿದುದು | | .... | 251 |
| ದೂರ್ವಾಸರ ಆಗಮನ | .... | .... | ,, |
| ದುರ್ಯೋಧನನು ದೂರ್ವಾಸರನ್ನು ಮರ್ಯಾದೆಯಿಂ ಕರೆತಂದುದು .... | .... | .... | 252 |

| ವಿಷಯ | ಪುಟ |
|---|---|
| ದುರ್ಯೋಧನನು ದೂರ್ವಾಸರಿಗೆ ಆತಿಥ್ಯಮಾಡಿದುದು .... | 252 |
| ದೂರ್ವಾಸರು ಪಾಂಡವರು ಇದ್ದೆಡೆಗೆ ಬಂದುದು .... | 254 |
| ಆಗ ಪರಸ್ಪರ ಕುಶಲಪ್ರಶ್ನೆ ... .... | ,, |
| ದೂರ್ವಾಸರು ಭೋಜನವನ್ನಪೇಕ್ಷಿಸಿದುದು .... | 255 |
| ಆಗ ನಾನಾವಿಧಚಿಂತೆ ... .... | ,, |
| ಆಗ ಶ್ರೀಕೃಷ್ಣನನ್ನು ದ್ರೌಪದಿಯು ಪ್ರಾರ್ಥಿಸುವಿಕೆ ... | 257 |
| ದ್ರೌಪದಿಯು ಶ್ರೀಕೃಷ್ಣನನ್ನು ನಾನಾರೀತಿಯಾಗಿ ಸ್ತುತಿಮಾಡಿದುದು .... .... .... | ,, |
| ಶ್ರೀಕೃಷ್ಣನ ಆಗಮನ .... .... .... | 259 |
| ದ್ರೌಪದಿಯು ಸಂತೋಷದಿಂದ ಪಾದದಲ್ಲಿ ಬಿದ್ದು ಸ್ತುತಿಮಾಡಿದುದು .... .... .... | 260 |
| ಶ್ರೀಕೃಷ್ಣನು ಪಾಂಡವರ ಇಷ್ಟವನ್ನು ನೆರವೇರಿಸಿದುದು .... | 261 |
| ಆಗ ದೂರ್ವಾಸರು ಕೃಷ್ಣಾಗಮನವನ್ನು ತಿಳಿದುದು .... | 262 |
| ಆಗ ಕೃಷ್ಣದೂರ್ವಾಸರ ಪ್ರೇಮಾಲಿಂಗನಸಂವಾದಗಳು .... | ,, |
| ಧರ್ಮರಾಯನು ದೂರ್ವಾಸರನ್ನು ಭೋಜನಕ್ಕಾಗಿ ಕರೆದುದು ... | 264 |
| ಆಗ ತೃಪ್ತರಾಗಿ ದೂರ್ವಾಸರು ಆಡಿದ ಮಾತುಗಳು .... | ,, |


೧೮ನೆಯ ಸಂಧಿ--


| | |
|---|---|
| ಕೃಷ್ಣನು ದ್ವಾರಕೆಗೆ ಹೊರಡಲು ಪಾಂಡವರ ಚಿಂತೆ .... | 265 |
| ಕಾಮ್ಯಕವನದಿಂದ ಬಂದ ಬ್ರಾಹ್ಮಣನಿಂದ ಪಾಂಡವರ ವರ್ತಮಾನ ಕೇಳಿದುದು .... .... | 266 |
| ಅದರಿಂದ ಧೃತರಾಷ್ಟ್ರರಾಯನ ಚಿಂತೆ .... ... | 267 |
| ಇದನ್ನು ನೋಡಿ ಕರ್ಣಾದಿಗಳ ಪ್ರಶ್ನೆ ಮತ್ತು ರಾಯನ ಉತ್ತರ ... .... .... | ,, |
| ಅದಕ್ಕೆ ಶಕುನಿಯ ಸಮಾಧಾನ .... .... | 268 |
| ಶಕುನಿಯು ಹೇಳಿದ್ದನ್ನು ಕರ್ಣನು ಅನುಮೋದಿಸಿದುದು .... | 269 |
| ಘೋಷಯಾತ್ರೆಗೆ ಹೋಗುವುದಕ್ಕೆ ಉಪಾಯ .... | 270 |

| ವಿಷಯ | ಪುಟ |
|---|---|
| ಅದಕ್ಕೆ ಧೃತರಾಷ್ಟ್ರನ ಅಸಮ್ಮತಿ .... .... | 271 |
| ಧೃತರಾಷ್ಟ್ರನನ್ನು ಸಮ್ಮತಿ ಪಡಿಸಿದುದು .... .... | ,, |
| ಇದು ಉಚಿತವಲ್ಲೆಂದು ಭೀಷ್ಮಾದಿಗಳು ಹೇಳಿದುದು .... | ,, |
| ಯಾರ ಮಾತನ್ನೂ ಕೇಳದೆ ಘೋಷಯಾತ್ರೆಗೆ ಹೊರಡುವಿಕೆ .... | 272 |
| ಘೋಷಯಾತ್ರಾ ವರ್ಣನೆ .... .... | 273 |
| ಆ ಕಾಲದಲ್ಲಿ ಅಪಶಕುನಗಳಾದರೂ ಅದನ್ನುಪೇಕ್ಷಿಸಿ ಹೊರಡುವಿಕೆ .... .... .... | 274 |
| ದ್ವೈತವನಕ್ಕೆ ಹೋಗಿ ಅಲ್ಲಿನ ಗೋವುಗಳನ್ನು ನೋಡಿದುದು .... | ,, |
| ಆಗ ಅನೇಕ ಗೋವುಗಳನ್ನು ದಾನವಾಗಿ ಕೊಡುವಿಕೆ .... | 275 |
| **೧೯ನೆಯ ಸಂಧಿ—** | |
| ಪಾಂಡವರು ಇದ್ದ ವನದಬಳಿ ದುರ್ಯೋಧನನು ಪಾಳೆಯವನ್ನು ಬಿಡಿಸಿದುದು .... .... .... | 276 |
| ಆಗ ಪರಿವಾರದ ತರುಣಿಯರ ಕಾರ್ಯಗಳು .... .... | 277 |
| ಆಗ ಅಲ್ಲಿದ್ದ ಬ್ರಾಹ್ಮಣರ ಅವಸ್ಥೆ .... .... | 278 |
| ಆಗ ದ್ವಿಜರಿಗೂ ತರುಣಿಯರಿಗೂ ನಡೆದ ವಿವಾದ .... | 279 |
| ಈ ತೊಂದರೆಯನ್ನು ಧರ್ಮರಾಯರಿಗೆ ತಿಳಿಸುವಿಕೆ .... | 281 |
| ಇದಕ್ಕೆ ಧರ್ಮರಾಯರ ಸಮಾಧಾನ .... .... | ,, |
| ಭೀಮನ ಕೋಪವನ್ನು ಧರ್ಮರಾಯರು ಶಮನಮಾಡುವಿಕೆ .... | ,, |
| ದುರ್ಯೋಧನನ ಸ್ತ್ರೀಜನರ ಬರುವಿಕೆಯ ವರ್ಣನೆ .... | ,, |
| ಆರಭಸಕ್ಕೆ ಕೋಪದಿಂದ ವನಪಾಲರು ಬರುವಿಕೆ .... | 283 |
| ಆಗ ಗಂಧರ್ವರು ಜಲಕೇಳಿಯನ್ನು ತಡೆಯಲು ಯುದ್ಧವಾಗುವಿಕೆ .... .... .... | 283 |
| ಆಗ ಗಂಧರ್ವರಾಜನು ಯುದ್ಧಕ್ಕೆ ಬಂದುದು .... | 286 |
| ಕೌರವರ ಪರಾಜಯ .... .... .... | 287 |
| **೨೦ನೆಯ ಸಂಧಿ—** | |
| ಆಗ ದುರ್ಯೋಧನನ ಚಿಂತೆ .... ... | 288 |
| ಕರ್ಣಾದಿಗಳು ಯುದ್ಧವನ್ನು ಮಾಡಿದುದು .... .... | ,, |

| ವಿಷಯ | | | ಪುಟ |
|---|---|---|---|
| ಗಂಧರ್ವನು ಸೈನಿಕರಿಗೆ ಅಭಯವನ್ನು ಹೇಳಿದುದು | | .... | 290 |
| ಆಗ ಕೌರವಸೇನೆಯ ದುರವಸ್ಥೆ | ... | .... | 291 |
| ಕೌರವರ ಸೇನೆಯ ಪರಾಕ್ರಮ | .... | .... | 202 |
| ಚಿತ್ರಸೇನನ ಯುದ್ಧ .... | .... | .... | 293 |
| ಕರ್ಣನು ಗಂಧರ್ವರನ್ನು ಓಡಿಸಿದುದು | .... | .... | ,, |
| ಆ ಯುದ್ಧವನ್ನು ಪಾಂಡವರು ನೋಡಿದುದು | .... | .... | 295 |
| ಕರ್ಣನು ಅಸ್ತ್ರಗಳನ್ನು ಬಿಡುವಿಕೆ | .... | .... | 296 |
| ಕರ್ಣ ಚಿತ್ರಸೇನರ ಪರಸ್ಪರಾಸ್ತ್ರಯುದ್ಧ | .... | .... | 297 |
| ಗಂಧರ್ವನು ಕರ್ಣನನ್ನು ಅಸ್ತ್ರಗಳಿಂದ ನೋಯಿಸಿದುದು | | .... | 298 |
| ಕರ್ಣನು ಗಂಧರ್ವನನ್ನು ನೋಯಿಸಿದುದು | .... | .... | ,, |
| ತಿರುಗಿ ಗಂಧರ್ವನು ಬಿಟ್ಟ ಅಸ್ತ್ರಗಳ ವಿಷಯದಲ್ಲಿ ಕರ್ಣನು ಬೆರಗಾದುದು .... | ... | .... | 299 |
| ಕರ್ಣನು ಹಿಂದಾಗಲು ಕೌರವರು ಚಿಂತೆ ಮಾಡಿದುದು | | .... | ,, |
| ಗಂಧರ್ವನ ಮೇಲೆ ಕೌರವರು ಯುದ್ಧ ಮಾಡಿದುದು | | .... | 300 |
| ಅವರನ್ನು ಸೋಲಿಸಲು ದುರ್ಯೋಧನನೇ ಯುದ್ಧಕ್ಕೆ ಬರುವಿಕೆ | | .... | ,, |
| ಆಗ ದುರ್ಯೋಧನನನ್ನು ನೋಡಿ ಜನಗಳು ಪರಿಹಾಸ ಮಾಡಿದುದು .... | .... | .... | 301 |
| ದುರ್ಯೋಧನನು ಗಂಧರ್ವನ ವಶವಾದುದು | .... | .... | 302 |

ನೆಯ ಸಂಧಿ—

| | | | |
|---|---|---|---|
| ದುರ್ಯೋಧನನನ್ನು ಹಿಡಿದಾಗ ಕೊಳ್ಳೆಯನ್ನು ಹೊಡೆದುದು | | .... | 305 |
| ಕೌರವರ ಪತ್ನಿಯರ ರೋದನ | ... | .... | ,, |
| ಭಾನುಮತಿ ಬಂದು ಧರ್ಮರಾಯನನ್ನು ಮರೆಹೋಗುವಿಕೆ | | ... | ,, |
| ಧರ್ಮರಾಯನು ಭಾನುಮತಿಯನ್ನೆತ್ತಿ ಸಮಾಧಾನ ಪಡಿಸಿದುದು .... | .... | .... | 307 |
| ಗಂಧರ್ವರನ್ನು ಗೆಲ್ಲುವುದಕ್ಕಾಗಿ ಭೀಮಸೇನನಿಗೆ ಹೇಳುವಿಕೆ | | .... | ,, |
| ಅದಕ್ಕೆ ಭೀಮಸೇನನ ಅಸಮ್ಮತಿ | .... | .... | ,, |
| ಧರ್ಮರಾಯನ ನೀತಿವಾಕ್ಯಗಳು | .... | .... | 308 |

| ವಿಷಯು | ಪುಟ |
|---|---|
| ಯುದ್ಧಕ್ಕೋಸ್ಕರ ಅರ್ಜುನನನ್ನು ಆಜ್ಞಾಪಿಸಿದುದು .... | 309 |
| ಧರ್ಮರಾಯನ ಅಪೇಕ್ಷೆಯಂತೆ ಅರ್ಜುನನು ಯುದ್ಧಕ್ಕೆ ಹೊರಟುದು | ,, |
| ಚಿತ್ರಸೇನನು ಹೇಳಿದ ನೀತಿ ... .... | 312 |
| ಅರ್ಜುನನು ಅಣ್ಣನ ಅಪ್ಪಣೆಯೇ ಮುಖ್ಯವೆಂದು ಹೇಳಿದುದು ... | 313 |
| ಆಗ ಅರ್ಜುನಚಿತ್ರಸೇನರಿಗೆ ಕೌರವರನ್ನು ಬಿಡಿಸುವ ವಿಷಯದಲ್ಲಿ ಯುಕ್ತಾಯುಕ್ತ ವಿಚಾರ .... .... | 314 |
| ಆದರೂ ಅಣ್ಣನ ಅಪ್ಪಣೆಯಂತೆ ಇವನನ್ನು ಬಿಡಿಸಬೇಕಾಗಿದೆ ಎಂದು ಹೇಳಿದುದು .... ... ... | 535 |
| ಆಗ ಚಿತ್ರಸೇನನು ಧರ್ಮರಾಯನ ಬಳಿಗೆ ಬಂದು ಅರ್ಜುನನನ್ನು ಸ್ತುತಿಮಾಡಿದುದು .... ... .... | 317 |


## ೨೦ನೆಯ ಸಂಧಿ—


| | |
|---|---|
| ಕಟ್ಟಿದ ದುರ್ಯೋಧನನನ್ನು ಧರ್ಮರಾಯನ ಬಳಿಗೆ ತಂದುದು .... | 317 |
| ಗಂಧರ್ವನು ತನ್ನ ಅಭಿಪ್ರಾಯವನ್ನು ಧರ್ಮರಾಯನ ಮುಂದೆ ಹೇಳಿದುದು .... ... .... | ,, |
| ಆಗ ಆತನಿಗೆ ಮರ್ಯಾದೆಮಾಡಿ ಕಳುಹಿದುದು .... | ,, |
| ಆಗ ಧರ್ಮರಾಯನ ಅಪ್ಪಣೆಯಂತೆ ಬಂದು ದ್ರೌಪದಿಯು ಇವರ ಅವಸ್ಥೆಯನ್ನು ನೋಡಿದುದು .... .... | 317 |
| ಎಲ್ಲರನ್ನು ಬಿಡಿಸಿ ದುರ್ಯೋಧನಾದಿಗಳಿಗೆ ಉಪಚಾರವನ್ನು ಹೇಳಿದುದು ... .... .... | 318 |
| ಭಾನುಮತಿಯು ಧರ್ಮರಾಯನಿಗೆ ನಮಸ್ಕಾರಮಾಡಿದುದು .... | 319 |
| ದುರ್ಯೋಧನನಿಗೆ ಧರ್ಮರಾಯನು ಹೇಳಿದ ಮಾತುಗಳು .... | 320 |
| ದುರ್ಯೋಧನನು ಅವಮಾನಿತನಾಗಿ ಹೊರಟುದು .... | ,, |
| ದುರ್ಯೋಧನನ ಪ್ರಾಯೋಪವೇಶ ... .... | 321 |
| ಆಗ ಭಾನುಮತಿ ಬಂದು ಸಮಾಧಾನ ಹೇಳಲು ನಡೆದ ಸಂವಾದ .... | ,, |
| ಆಗ ಗಾಂಧಾರಿಯು ಹೇಳಿದುದು .... .... | 323 |
| ದುರ್ಯೋಧನನ ನುಡಿ .... .... .... | 324 |

| ವಿಷಯು | | ಪುಟ |
|---|---|---|
| ಧೃತರಾಷ್ಟ್ರರಾಯರ ಆಗಮನ ಮತ್ತು ಉಚಿತ ಭಾಷಣ | ... | 325 |
| ದುರ್ಯೋಧನನು ತನಗೆ ಈ ಜಗತ್ತು ಬೇಡವೆಂದು ಹೇಳಿದುದು | .... | ,, |
| ಅದಕ್ಕೆ ಧೃತರಾಷ್ಟ್ರರಾಯನ ಉತ್ತರ | .... | 326 |
| ದುರ್ಯೋಧನನ ಮಾತು .... .... | .... | ,, |
| ತಂದೆಯು ಮಾತನ್ನು ಕೇಳದೇಯಿರಲು ಹಿಂತಿರುಗುವಿಕೆ | .... | 327 |
| ಭೀಷ್ಮಾದಿಗಳು ಬಂದು ಹೇಳಿದುದು .... | .... | ,, |
| ದುರ್ಯೋಧನೋಕ್ತಿ .... .... | .... | ,, |
| ಭೀಷ್ಮಪ್ರತ್ಯುಕ್ತಿ .... .... | .... | 328 |
| ದುರ್ಯೋಧನನು ತನ್ನ ದುಃಖವನ್ನು ಹೇಳಿಕೊಳ್ಳುವಿಕೆ | .... | ,, |
| ಆಗ ಭೀಷ್ಮಾದಿಗಳ ವಚನ .... | ... | ,, |
| ಭೀಷ್ಮಾದಿಗಳ ಮಾತನ್ನು ನಡಿಸದೇ ಇರಲು ಅವರು ಹಿಂತಿರುಗಿದುದು .... .... | .... | 329 |
| ಕರ್ಣಾದಿಗಳ ಆಗಮನ ಮತ್ತು ಭಾಷಣ .... | .... | ,, |
| ಅವರ ಮಾತನ್ನು ಒಪ್ಪದೆ ಇರಲು ಅವರು ಹಿಂತಿರುಗುವಿಕೆ | .... | 330 |
| ದುಶ್ಶಾಸನನು ಬಂದು ಮಾತನಾಡಿದುದು .... | .... | 331 |
| ದುಶ್ಶಾಸನನು ಹಿಂತಿರುಗಿದುದು ... | .... | 333 |
| ನಗರಕ್ಕೆ ಬರಬೇಕೆಂದು ಪುರಜನರ ಪ್ರಾರ್ಥನೆ | .... | ,, |
| ದುಶ್ಶಾಸನನೇ ಮುಂದೆ ನಿಮ್ಮಗರಸಾಗುವನೆಂದು ಹೇಳುವಿಕೆ | .... | 333 |
| ಹೀಗಿರುವಾಗ ದೈತ್ಯರು ಬಂದು ಸಹಾಯರಾಗಿರುವೆವೆಂದು ಹೇಳಿದುದು .... .... | .... | 334 |

ಎಪ್ಪತ್ತೈನೆಯ ಸಂಧಿ —

| | | |
|---|---|---|
| ಕರ್ಣನಿಂದೊಡಗೂಡಿ ದುರ್ಯೋಧನನ ಚಿಂತೆ | .... | 336 |
| ಕರ್ಣನಿಗೆ ಸೂರ್ಯನ ಹಿತೋಕ್ತಿ .... | .... | 338 |
| ಕರ್ಣನು ಅದನ್ನೊಪ್ಪದೆ ತನ್ನ ಔದಾರ್ಯವನ್ನು ಹೊಗಳಿಕೊಂಡುದು .... .... | .... | ,, |
| ವಿಪ್ರವೇಷಧಾರಿಯಾಗಿ ಇಂದ್ರನು ಬಂದುದು | — | 339 |
| ಇಂದ್ರನು ಕವಚಕುಂಡಲಗಳನ್ನು ಬೇಡಿದುದು | .... | 340 |
| ಕರ್ಣನ ದಾನ .... .... | .... | ,, |

| ವಿಷಯ | ಪುಟ |
|---|---|
| ಇಂದ್ರನು ತನ್ನ ಆಯುಧವನ್ನು ಕರ್ಣಾದಿಗಳಿಗೆ ಕೊಟ್ಟುದು .... | 341 |

೨೪ನೆಯ ಸಂಧಿ—

| | |
|---|---|
| ಕೌರವನ ಬಿಡುಗಡೆಯನ್ನು ಸೈಂಧವನು ಕೇಳಿದುದು .... | ,, |
| ಜೋಯಿಸರ ಮಾತನ್ನುಪೇಕ್ಷಿಸಿ ಹೊರಟುದು .... | 342 |
| ನಾನಾವಿಧ ಅಪಶಕುನಗಳು .... | ,, |
| ಪಾಂಡವರ ಆಶ್ರಮದ ಬಳಿ ಬಂದು ಸೈಂಧವನು ಇಳಿದುದು .... | 343 |
| ದೂತರೊಡನೆ ಆಭರಣಗಳನ್ನು ಕಳುಹಿದ್ದುದು .... | ,, |
| ಅವುಗಳನ್ನು ಸ್ವೀಕರಿಸದೆ ಇರಲು ಸೈಂಧವನಿಗೆ ತಿಳುಹಿದುದು .... | 345 |
| ಸೈಂಧವನ ಬರುವಿಕೆ .... ... ... | ,, |
| ಸೈಂಧವನ ಮಾತು ... .... .... | 346 |
| ದ್ರೌಪದಿಯ ಮಾತು .... .... .... | ,, |
| ಮುನಿಜನಗಳ ಬುದ್ಧಿವಾದ .... .... | ,, |
| ಋಷಿಜನರಿಂದ ಅಲ್ಲಿನ ವರ್ತಮಾನವನ್ನು ಕೇಳಿದುದು ... | 347 |
| ಭೀಮಾರ್ಜುನಸೈಂಧವರ ಯುದ್ಧ .... .... | 348 |
| ಸೈಂಧವನ ರಥವನ್ನು ತಡೆದುದು .... .... | 349 |
| ಸೈಂಧವನನ್ನು ಕಟ್ಟಿ ಧರ್ಮರಾಯನ ಬಳಿಗೆ ತಂದುದು .... | 351 |
| ಅಣ್ಣನ ಅಪ್ಪಣೆಯಿಂದ ಭೀಮನು ಸೈಂಧವನನ್ನು ಬಿಡುವಿಕೆ .... | ,, |
| ಬಳಿಕ ಸೈಂಧವನ ತಪಸ್ಸು .... .... | 352 |
| ಸೈಂಧವನಿಗೆ ಈಶ್ವರನು ವರವನ್ನು ಕೊಟ್ಟುದು .... | 353 |
| ಯುಧಿಷ್ಠಿರಮಾರ್ಕಂಡೇಯಸಂವಾದ .... .... | 354 |
| ಶ್ರೀರಾಮರ ಕಥೆಯನ್ನು ಮಾರ್ಕಂಡೇಯರು ಹೇಳಿದುದು .... | ,, |

೨೫ನೆಯ ಸಂಧಿ—

| | |
|---|---|
| ಮಾರ್ಕಂಡೇಯನು ನಾನಾ ಕಥೆಗಳನ್ನು ಹೇಳಿದುದು .... | 356 |
| ಕೀಚಕನು ಕೌರವರ ಗೋವುಗಳನ್ನು ಹಿಡಿದುಕೊಂಡು ಹೋದುದು .... .... ... | 357 |
| ಭೀಷ್ಮಾದಿಗಳು ಕೀಚಕನನ್ನು ತಡೆದುದು .... .... | ,, |

| ವಿಷಯ | ಪುಟ |
|---|---|
| ದುರ್ಯೋಧನನು ಪೂರಣಹೋಮಕ್ಕೋಸ್ಕರ ಕನಕನನ್ನು ಕರೆಕಳುಹಿಸಿದುದು .... .... .... | 358 |
| ಕನಕನು ತನ್ನನ್ನು ಹೊಗಳಿಕೊಂಡುದು .... .... | ,, |
| ಆಗ ದುರ್ಯೋಧನನು ಯಜ್ಞಸಾಧನವನ್ನು ಒದಗಿಸಿ ಕೊಟ್ಟುದು .... .... .... | 359 |
| ಯುದ್ಧದಲ್ಲಿ ಭೂತೋತ್ಪತ್ತಿ .... ... | ,, |
| ಆಭೂತವು ಕನಕನ ಅಪೇಕ್ಷೆಯಂತೆ ಪಾಂಡವರನ್ನು ಕೊಲ್ಲಲು ಅವರ ಆಶ್ರಮಕ್ಕೆ ಬಂದುದು .... .... | 360 |
| ಆಗ ಶ್ರೀಕೃಷ್ಣನು ಪಾಂಡವರ ಸಂರಕ್ಷಣೆಗೋಸ್ಕರ ಉಪಾಯವನ್ನು ಚಿಂತಿಸಿದುದು .... .... .... | 361 |
| ಯಮನಿಗೆ ಯಕ್ಷನಾಗೆಂದು ಹೇಳಿ ತಾನು ಮೃಗರೂಪವನ್ನು ತಾಳುವೆನೆಂದು ಹೇಳಿದುದು .... .... | 362 |
| ಆ ಭೂತವು ಇದನ್ನು ನೋಡಿ ಹಿಂತಿರುಗುವುದೆಂದು ಹೇಳಿದುದು.... | ,, |

೨೬ನೆಯ ಸಂಧಿ—

| | |
|---|---|
| ಪಾಂಡವರು ವನದಲ್ಲಿದ್ದುದು .... .... | 363 |
| ಮೃಗರೂಪಿಯಾಗಿ ಅರಣಿಯನ್ನುಕೊಂಡೊಯ್ದುದು .... | 364 |
| ಧರ್ಮರಾಯರಲ್ಲಿ ಈ ಸಂಗತಿಯನ್ನು ತಿಳಿಸಿದುದು .... | ,, |
| ಅರಣಿಯನ್ನು ತಂದುಕೊಡುವುದಕ್ಕಾಗಿ ಹೋದ ಪಾಂಡವರನ್ನು ವಿಷಸರೋವರಕ್ಕೆ ಕರೆತಂದುದು .... .... | 365 |
| ಆಮೃಗವನ್ನು ಹಿಡಿದುದು .... .... | 366 |
| ಆಗ ದಾಹವಾಗಲು ನೀರನ್ನು ತಾರೆಂದು ನಕುಲನಿಗೆ ಹೇಳಿದುದು .... .... .... | ,, |
| ನಕುಲನ ಗಮನ .... .... .... | ,, |
| ನಕುಲನು ನೀರನ್ನು ಕುಡಿಯುವಾಗ ಯಕ್ಷನು ಬೇಡವೆಂದು ಹೇಳಿದುದು .... .... .... | 368 |
| ನಕುಲನು ಕೆಳಗೆ ಬೀಳಲು ಸಹದೇವನ ಆಗಮನ .... | ,, |
| ಆತನು ಯಕ್ಷನ ಮಾತನ್ನುಪೇಕ್ಷಿಸಲು ಕೆಳಗೆ ಬೀಳುವಿಕೆ .... | 368 |

| ವಿಷಯ | ಪುಟ |
|---|---|
| ಅರ್ಜುನಾಗಮನ .... .... .... | 369 |
| ಅರ್ಜುನನು ಪರವಶನಾಗಿ ಕೆಳಗೆ ಬಿದ್ದುದು .... .... | 370 |
| ಭೀಮನು ಬಂದು ಇವರ ಸ್ಥಿತಿಯನ್ನು ನೋಡಿ ತಾನೂ ನೀರನ್ನು ಕುಡಿದುದು .... .... .... | ,, |
| ಭೀಮನೂ ಪರವಶನಾಗಿ ಬಿದ್ದುದು ... ... | 371 |
| ಆಗ ಧರ್ಮರಾಯನ ಆಗಮನ .... .... | ,, |
| ಧರ್ಮರಾಯನ ಪ್ರಳಾಪ .... .... .... | 372 |
| ನೀರನ್ನು ಕುಡಿಯಲು ಧರ್ಮರಾಯನ ಪ್ರಯತ್ನ .... | 374 |
| ಯಕ್ಷನು ಹೇಳಿದುದು .. .... .... | ,, |
| ಧರ್ಮರಾಯನ ವಾಕ್ಯ .... .... .... | 375 |
| ಯಕ್ಷ ಮತ್ತು ಧರ್ಮರಾಯನ ಪ್ರಶ್ನೋತ್ತರಗಳು .... | ,, |
| ಆ ಭೂತವು ಕನಕನನ್ನು ತಿಂದುಹೋಗುವಿಕೆ .... | 379 |
| ಬಳಿಕ ಯಮನು ಈ ವೃತ್ತಾಂತವನ್ನು ಮಗನಿಗೆ ಹೇಳಲಾಗಿ ಕೃಷ್ಣನನ್ನು ಕೊಂಡಾಡಿದುದು .... .... | ,, |

ಶ್ರೀ

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

# ಅರಣ್ಯಪರ್ವ

ಚತುರ್ಥ ಸಂಪುಟ

## ಒಂದನೆಯ ಸಂಧಿ

ಸೂಚನೆ.

ಸಕಲರಾಜ್ಯವನುಳಿದವರು ಕಾ
ಮ್ಯಕಮಹಾಕಾನನಕೆ ಬಂದುಳಿ[1]
ಬಕ[2] ಕುಲಾಂತಕ ಕೆಡಹಿದನು ಕಿಮ್ಮೀರದಾನವನ ||

ಪಾಂಡವರು ಗಂಗೆಯನ್ನು ದಾಟಿ ಉತ್ತರ ತೀರದಲ್ಲಿ ಇರುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ಗಂಗಾತೀರದಲಿ ಭೂ
ಪಾಲಕರು ಗುರುಭೀಷ್ಮವಿದುರಾದ್ಯಖಿಳಬಾಂಧವರ |
ಬೀಳುಕೊಟ್ಟರು ಗಜಪುರದ ಜನ
ಜಾಲವನು ಕಳುಹಿದರು ಗಂಗಾ
ಕೂಲದುತ್ತರಭಾಗದಲಿ ಮಾಡಿದರು ವಿಶ್ರಮವ ||

---

1 ದೊಳಗೆಕೀ, ಡ. 2 ಚಕ, ಡ.

ರಾಯನನ್ನು ಪುರಜನಗಳು ಹಿಂಬಾಲಿಸಿದುದು.

ನಿಲಿಸೆ ನಿಲ್ಲದೆ ಬಂದರರಸನ
ಬಚ್ಚಿಯುಲಗ್ಗದ ಮಂಡಲೇಶ್ವರ
ರೊಲಿದು ಸಾಕಿದ ರಾಜಪುತ್ರರು ಹಲವುಮನ್ನಣೆಯು ।
ಬಲುಭಟರು ಬಾಹತ್ತರದ ನಿ
ಶ್ಚಲನಿಯೋಗಿಗಳಾಶ್ರಮಿಗಳ
ಗ್ಗಳಿಯು ವಿಪ್ರಸ್ತೋಮ ಬಂದುದು ಕೋಟಿಸಂಖ್ಯೆಯಲಿ ॥ ೨

ಧರ್ಮರಾಯನ ಚಿಂತೆ.

ತಿರುಗಿ ಕಂಡನು ಭೂಮಿಭಾರದ
ನೆರವಿಯನು ಮೂಗಿನಲಿ ಬೆರಳಿ[1]
ಟ್ಟರಸ ತಲೆದೂಗಿದನು ಸುಯ್ದನು ಬೈದು ದುಷ್ಕೃತವ ।
ಧರಣಿ ಸೇರಿದುದಹಿತರಿಗೆ ಕರಿ
ತುರಗರಥವೆಮಗಿಲ್ಲ ವಿಪಿನದ
ಪರಿಬವಣೆಗಿವರೇಕೆ ಬೆಸಗೊಳು ಭೀಮ ನೀನೆಂದ[2] ॥ ೩

ನಿಲ್ಲಿರೈ ದ್ವಿಜನಿಕರ ಕಳುಹಿಸಿ
ಕೊಳ್ಳಿರೈ ಪುರವರ್ಗ ನೇಮವ
ಕೊಳ್ಳಿರೈ ಪರಿವಾರ ಮಕ್ಕಳ ತಂಡವೊದಲಾಗಿ ।
ಎಲ್ಲಿ ಮಳೆ ಮರ ಗಾಡು ಪಲ್ಲವ
ಫುಲ್ಲಫಲಪಾನೀಯಪೂರಿತ
ವೆಲ್ಲಿ ರಾಯನ ಸೆಜ್ಜೆ ಯುರವುನೆಗೆಂದನಾಭೀಮ ॥ ೪

ಜನಗಳು ರಾಯನನ್ನು ಸ್ತುತಿಸುವಿಕೆ.

ಅವನಿಪತಿ ಚಿತ್ತೈಸು ಬಹಳಾ
ರ್ಣವವ ಹೊಗು ಹಿಮಗಿರಿಯಲಿರು ಭೂ
ವಿವರಗತಿಯಲಿ ಗಮಿಸು ಗಾಹಿಸು ಗಹನಗಹ್ವರವ ।

---

1 ಗಲ್ಲದಲಿ ಕರವಿ, ಚ. 2 ನಿಲಿಸೆಂದ, ಟ

ಎವಗೆ ನೀನೇ ಜೀವ ನೀನೇ
ವಿವಿಧಧನ ಗತಿ ನೀನೆ ಮತಿ ನೀ
ನವಗಡಿಸಬೇಡಕಟ ಕೃಪೆಮಾಡೆಂದುದಖಿಳಜನ ॥ ೫

ತುಂಬಿದನು ಕಂಬನಿಯನಕಟ ವಿ
ಡಂಬಿಸಿತೆ ವಿಧಿ ಯೆನ್ನನಿನಿಬರ
ನಂಬಿಸುವೆ ಪರಿಯೆಂತು ವಸನಗ್ರಾಸವಾಸದಲಿ ।
ತುಂಬಿ ಸವಿಗೆಡಹಿದಳಲಕ್ಷ್ಮಿಯು
ಮುಂಬಿಗನೊಳಪದೆಸೆಯು ಪಂತದ [1]
ಚುಂಬಕನೊಳೇನುಂಟು ಫಲವೆಂದರಸ ಬಿಸುಸುಯ್ದ ॥ ೬

ಧೌಮ್ಯರು ಸೂರ್ಯನನ್ನು ಪ್ರಾರ್ಥಿಸೆಂದು ಹೇಳುವಿಕೆ.

ಭೇದ [2] ವೇಕೆಲೆ ನೃಪತಿ ಹರುಷ ವಿ
ಷಾದದಲಿ ಸುಖದುಃಖದಲಿ ನುತಿ
ವಾದಪರಿವಾದದಲಿ ಸಮಬುದ್ಧಿಗಳಲೇ ಬುಧರು ।
ಈದುರಂತದ ಚಿಂತೆ ಬೇಡೀ
ದ್ವಾದಶಾತ್ಮನ ಭಜಿಸಿದೊಡೆ ಭ
ಕ್ಷ್ಯಾದಿಬಹುವಿಧದನ್ನ ಸಿದ್ಧಿಪುದೆಂದನಾಧೌಮ್ಯ ॥ ೭

ಧರಣಿಪತಿ ಕೇಳ್ ಧೌಮ್ಯವಚನಾಂ
ತರದೊಳಮರನದೀವಿಗಾಹನ
ಪರಮಪಾವನಕರಣನೀಕ್ಷಿಸಿ ತರಣಿಮಂಡಲವೆ ।

ಧರ್ಮರಾಯನ ಸೂರ್ಯಪ್ರಾರ್ಥನೆ.

ಮುರುಹಿ ಮೂಲಾಧರಪವನನ
ನುರುಸುಷುಮ್ನೆಗೆ ನೆಗಹಿ ನಿಶ್ಚಲ
ವರಸಮಾಧಿಯೊಳಿನನ ಮೆಚ್ಚಿಸಿದನು ಮಹೀಪಾಲ [3] ॥ ೮

1 ಕುಂತದ, ಚ ಕುಂದದ, ಟ. 2 ಖೇದ, ಡ.
3 ನೆನೆಯುಲ್ಲು ಖಂದನಾಕ್ಷಣಕೆ, ಝ.

ಸೂರ್ಯನು ಪಾಂಡವರಿಗೆ ಅಕ್ಷಯ ಪಾತ್ರವನ್ನು ಕೊಟ್ಟದ್ದು.

ಏನು ವರಿಸಿದೆ ಧರ್ಮಸುತ ಹೇ
ಳೆನಲು ಕಂದೆಱೆಯುತ್ತ ನುಡಿದನು
ನೀನಲ್ಲೆ ತ್ರೈಮೂರ್ತಿರೂಪನು ಕರ್ಮಸಾಕ್ಷಿಯಲ್ಲೆ ।
ತಾನು ಬಿನ್ನಹಮಾಡಲೇಕೀ
ಕಾನನದಿ ವಿವಿಧಾನ್ನಪಾನ
ಕ್ಕೇನಪಾಯವು ವಿಲ್ಲದಂತಿರೆ ಕರುಣಿಸುವುದೆಂದೆ ॥ ೯
ವರವನಿತ್ತೆನು ನಿನಗೆ ಹೇಮದ
ಚರುಕವಿದೆ ವಿವಿಧಾನ್ನಪಾನೋ
ತ್ಕರದ ತವನಿಧಿ ನಿನ್ನ ವಧು ಬಾಣಸದ ಕರಣದಲಿ ।
ಇರವು ರಚಿಸಲಿ ಬಳಿಕುಣಲಿ ಸಾ
ವಿರವನಂತರ ನೀವು ಬಳಿಕಂ
ಬುರುಹಮುಖಿ ಮಱುದಿವಸವೀಪರಿಯೆಂದನಾದ್ಯುಮಣಿ ॥ ೧೦
ಭೂಮಿಪತಿ ಭುಲ್ಲವಿಸಿದನು ನಿ
ಸ್ಸೀಮಸಂತೋಷದಲಿ ಸುಜನ
ಸ್ತೋಮರಕ್ಷಣಕಾದ ನಿರ್ವಾಹದ ನಿರೂಢಿಯಲಿ ।
ಆಮುನೀಂದ್ರಂಗೆಱಗಿದನು ನಿಜ
ಕಾಮಿನಿಯ ಕರೆದೀಹದನು ಸು
ಪ್ರೇಮದಿಂದಱುಹಿದನು ಭೀಮಧನಂಜಯಾದ್ಯರಿಗೆ [1] ॥ ೧೧
ಇವರು ತಿರುಗಿದರಿತ್ತಲಡವಿಯ
ಭವಣಿಗೆಯ ಭಾರಾಂಕಭಾಷೆಯ
ಲವಿರಳಿತಜನಜಾಲಸಹಿತಾರಣ್ಯವಾಸದಲಿ [2] ।

ಇತ್ತ ಮೈತ್ರೇಯನು ದುರ್ಯೋಧನನನ್ನು ನೋಡುವಿಕೆ.

ಅವನಿಪತಿ ಕೇಳಿತ್ತಲಾ ಕೌ

1 ತನ್ನ ಸಹೋದರವ್ರಜಕೆ, ಚ. 2 ಮಾರ್ಗದಲಿ, ಚ.

ರವನ ನಗರಿಗೆ ಪಾರಿಕಾಂಕ್ಷಿ
ಪ್ರವರನೊಬ್ಬನು ಬಂದು ಕಂಡನು ಕೌರವೇಶ್ವರನ ॥ ೧೨

ಮುನಿಯು ಸತ್ಕರಿಸಿದನು ಕೌರವ
ಜನಪನಾಮುನಿಮುಖ್ಯನೀತನ
ವಿನುತರಚನೆಗೆ ಮೆಚ್ಚಿ ನುಡಿದನು ರಾಜಕಾರಿಯುವ ।

ಮೈತ್ರೇಯನು ಪಾಂಡವರಿಗೆ ರಾಜ್ಯವನ್ನು ಕೊಡು ಎಂದು ಹೇಳಿದುದು.

ನಿನಗಿದೊಂದೇ ಕೊಱತೆ ಪಾಂಡವ
ಜನಪರನು ಜೂಜಿನಲಿ ಸೋಲಿಸಿ
ಕನಲಿಸಿದೆ ನೀ ಕೆಡುವೆ ಯೆಂದನು ಕೌರವೇಶ್ವರನ[1] ॥ ೧೩

ಹೋದ ಕೃತಿಯುಂತಿರಲಿ ಸಾಕಿ
ನ್ನಾದರೆಯು ಕೌಂತೇಯರನು ಕರೆ
ದಾದರಿಸಿ ಕೊಡು ಧರೆಯನೆನೆ ಕೊಪ್ಪರಿಸಿ ಖಾತಿಯಲಿ ।

ಮೈತ್ರೇಯನು ತನ್ನ ಮಾತನ್ನೊಪ್ಪದಿರಲು ಶಾಪವನ್ನು ಕೊಡುವಿಕೆ.

ಹೊಯ್ದು ತೊಡೆಯನು ಹಗೆಗೆ ಕೊಡುವೆನೆ
ಮೇದಿನಿಯನೆನೆ ರೋಷಶಿಖಿಯಲಿ
ಕಾದುದಾತನ ಹೃದಯ ಶಪಿಸಿದನಂದು ಮೈತ್ರೇಯ ॥ ೧೪

ತೊಡೆಗಳನು ಕಲಿಭೀಮ ಬವರದೊ
ಳುಡಿದು ಬಿಸುಡಲಿ ಯೆಂದು ಖತಿಯಲಿ[2]
ನುಡಿಯೆ ಮುನಿಪನ ಸಂತವಿಟ್ಟನು ಬಂದು ಧೃತರಾಷ್ಟ್ರ ।
ತೊಡೆಗೆ ಬಂದುದು ತೋಟಿ ಸಾಕಿ
ನ್ನೊಡಬಡಿಸಿ ಫಲವಿಲ್ಲ ನಮ್ಮಯ
ನುಡಿಗೆ ಮಱುಮಾತಿಲ್ಲೆನುತ ಮುನಿ ಸರಿದನಾಶ್ರಮಕೆ ॥ ೧೫

---

1 ಯುದಱಿಂದ ಬಲುಗೇಡಹುದು ನಿನಗೆಂದ, ಚ. 2 ಶಾಪವ, ಚ.

ಆಮಹಾಮುನಿಶಾಪಭಯವನು
ಭೀಮಸೇನನ ಬಲುಹ ನೆನೆಯುತ
ವೈಮನಸ್ಯದ ಬೇಗೆಯಲಿ ಬಲು ಬೆಂದು ಬೇಸಱದೆ ।
ಭೂಮಿಪತಿ ಕರೆಸಿದನು ವಿದುರನ
ನಾಮಹಾಜ್ಞಾನಿಯನು ಮುನಿಪನ
ತಾಮಸವನಱುಹಿದರೆ ಬಳಿಕಿಂತೆಂದನಾವಿದುರ ॥ ೧೬

ಮೈತ್ರೇಯನ ಮಾತನ್ನು ವಿದುರನು ಒಪ್ಪಲು ವಿದುರನನ್ನು
ಧಿಕ್ಕರಿಸಿದುದು.

ತಪ್ಪದಿದು ನಿನ್ನಾತಗಳ ಭುಜ
ದರ್ಪತೀವ್ರಜ್ವರದ ವಿಕಳರ
ನೊಪ್ಪಿ ಕಾದೆ ಸುಯೋಧನಾದ್ಯರು ಜನಿಸಲೀಜಗಕೆ ।
ತಪ್ಪುವುದೆ ಋಷಿವಚನ ಸಂಧಿಯೊ
ಳೊಪ್ಪುಕೊಳು ಪಾಂಡವರನಲ್ಲದೊ
ಡಪ್ಪಿಕೊಂಬಳು ಮೃತ್ಯು ನಿನ್ನ ಕುಮಾರಕರನೆಂದ ॥ ೧೭
ಎನಲು ಕಿಡಿ ಕಿಡಿ ಯಾಗಿ ಕೌರವ
ಜನಪ ವಿದುರನ ಬೈದು ಕುಂತಿಯ
ತನುಜರಲಿ ಬಾಂಧವನಲಾ ಹೋಗವರ ಹೊರೆಗೆಂದು ।

ಕಾಮ್ಯಕವನವನ್ನು ಕುರಿತು ವಿದುರನ ಗಮನ

ಮುನಿದು ಗರ್ಜಿಸೆ ಜೀಯ ಕರ ಲೇ
ಸೆನುತ ಮನದುಬ್ಬಿನಲಿ ಪಾಂಡವ
ಜನಪರಿಹ ಕಾಮ್ಯಕವನಾಂತರಕೈದಿದನು ಬಳಿಕ [1]॥ ೧೮
ಇದಿರುಗೊಂಡರು ಹಿರಿದು ಮನ್ನಿಸಿ
ವಿದುರನನು ಕೊಂಡಾಡಿದರು ಕೇ
ಳಿದರು ಧೃತರಾಷ್ಟ್ರಾದಿಗಳ ಸುಕ್ಷೇಮಕುಶಲವನು ।

[1] ತಕೆ ಬಂದನಾವಿದುರ, ಡ.

ವಿದುರನಾಗಮನಪ್ರಪಂಚದ
ಹದನನೆಲ್ಲವ ಕೇಳಿದರು ಹೇ
ಳಿದನು ನಿಜವೃತ್ತಾಂತವನು ವಿದುರಂಗೆ ಯಮಸೂನು ‖ ೧೯

ಧೃತರಾಷ್ಟ್ರನು ವಿದುರನನ್ನು ಕರೆಕಳುಹಿಸಿದುದು.

ಇತ್ತಲಾವಿದುರನ ವಿಯೋಗದ
ಚಿತ್ತದಂತಸ್ತಾಪದಲಿ ನೃಪ
ಮತ್ತೆ ದೂತರ ಕಳುಹಿ ಕರೆಸಿದನಾತನನು ಪುರಕೆ [1] |
ಹೆತ್ತಮಕ್ಕಳ ಬಿಡು ಪೃಥಾಸುತ
ರತ್ತ ತಿರುಗೆನೆ ಖಾತಿಗೊಂಡೆನು
ಮತ್ತೆ ಮುನಿಯದಿರೆಂದು ವಿದುರನನಪ್ಪಿದನು ನೃಪತಿ ‖ ೨೦

ಪಾಂಡವರ ಸ್ಥಿತಿಯನ್ನು ಕೇಳುವಿಕೆ.

ಆವ ಬನದಲಿ ಪಾಂಡುಸುತರಿಗೆ
ಠಾವು ನಿನಗೇನೆಂದರನಿಬರ
ನಾವ ಬನದಲಿ ಕಂಡೆ ಕೂಡೆನಿತುಂಟು ಪರಿವಾರ |
ಆವುದಭಿಮತ ಭೀಮಸೇನನ
ಭಾವವೇನು ಯುಧಿಷ್ಠಿರಾದಿಗ
ಳಾವ ಭಂಗಿಯಲಿದ್ದರೆಂದನು ನಗುತ ಧೃತರಾಷ್ಟ್ರ ‖ ೨೧

ಅರಸ ಕೇಳ್ ಗಂಗಾನದಿಯಲು
ತ್ತರಿಸಲವರಿಗೆ ಕಮಲಮಿತ್ರನ
ಕರುಣವಾಯಿತು ಕನಕಪಾತ್ರೆಯೊಳಕ್ಷಯಾನ್ನದಲಿ |
ಪರಿಕರದ ಪರುಠವಣೆಯಲಿ ಸಾ
ವಿರದ ಶತಸಂಖ್ಯಾತಧರಣೀ
ಸುರನಿಯೋಗಿಗಳಾಪ್ತಜನಸಹಿತೈದಿದರು ವನವ ‖ ೨೨

1 ದನು ಕರತರಿಸಿದನು ಗಜಪುರಿಗೆ, ಡ.

ಜನಪ ಕೇಳ್ ಕಿಮ್ಮೀರನೆಂಬವ
ನನಿಮಿಷರಿಗುಬ್ಬಸದ ಖಳನಾ
ತನ ವಿಭಾಡಿಸಿ ಹೊಕ್ಕರವರಾರಣ್ಯಮಂದಿರವ ।
ದನುಜನೇ ಕಿಮ್ಮೀರನಾತನ
ನನಿಲಜನೊ ಫಲುಗುಣನೊ ಕೊಂದಾ
ತನೊ ಯುಧಿಷ್ಠಿರನೊ ನೃಪ ವಿಸ್ತರವಾಗಿ ಹೇಳೆಂದ ॥ ೨೩

ಅರಸ ಕೇಳುವುದೇಕಚಕ್ರದೊ
ಳೊರಸಿದನಲಾ ಭೀಮನಾತನ
ಹಿರಿಯನೀಕಿಮ್ಮೀರ ಬಾಂಧವನಾಹಿಡಿಂಬಕಗೆ ।
ಧರಣಿಪನ ಪರಿವಾರದುಬ್ಬಿನ
ಭರವ ಕಂಡನು ತನ್ನ ತಮ್ಮನ
ಹರಿಬವನು ಮರಳಿಚುವೆನೆಂದಿದಿರಾದನಮರಾರಿ ॥ ೨೪

ಕಾಮ್ಯಕವನಕೆ ಬರಲು ಕಿಮ್ಮೀರನು ದಾರಿಗೆ ಅಡ್ಡಕಟ್ಟಿದುದು.

ಇವರು ಮೂಱನೆಯ ದಿನಕೆ ಕಾಮ್ಯಕ
ನವಮಹಾಕಾನನಕೆ ಬರೆ ದಾ
ನವನು ದಾರಿಯ ಕಟ್ಟಿ ನಿಂದನು ಕೋಪ ಭುಗಿಲಿಡಲು [1] ।
ಅವನ ಕಂಗಳ ಕೆಂಪಿನಲಿ ಮೇ
ಣವನ ದಾಡೆಯ ಮಿಂಚಿನಲಿ ಖಳ
ನವಯವವ ಕಂಡಳುಕಿ ನಿಂದರು ಮುಂಗುಡಿಯ ಭಟರು ॥ ೨೫

ಮುಂದೆ ಘೋರಾರಣ್ಯವಿದೆ ಸುರ
ಬಂದಿಕಾಱನ ಕಾಹಿನಲಿ ಕಾ
ಳಂದಿಯುದರದ ಮಬ್ಬಿನಂತಿದೆ ತೀವ್ರತರತಿಮಿರ ।
ಇಂದಿನಿರುಳಲಿ ಬದುಕಿದರೆ ಸಾ

1 ಕೈಯುಮುಷ್ಟಿಯಲಿ, ಡ.

ಆಗ ಪಾಂಡವರ ಭಯ.

ವೆಂದಿಗೆಮಗಿಲ್ಲೆನುತ ಭಯದಲಿ
ನಿಂದುದಲ್ಲಿಯದಲ್ಲಿ ಪಾಂಡುಕುಮಾರಪರಿವಾರ[1] ॥ ೨೬

ದೈತ್ಯನ ಘೋರವಾದ ಧ್ವನಿ.

ಅಡಿಗಡಿಗೆ ಮಾನವರ[2] ಸೊಗಡವ
ಗಡಿಸುತಿದೆ ಬರಹೇಳು ನೆತ್ತರು
ಗುಡುಹಿಗೈನೆಯರೆಲ್ಲಿ ಶಾಕಿನಿಡಾಕಿನೀನಿಕರ ।
ತಡೆಯ ಬೇಡಾ ತಿನ್ನೆನುತ ಬೊ
ಬ್ಬಿಡುತ ಖಳ ತಱುಬಿದನು ರಾಯನ
ಮಡದಿ ಹೊಕ್ಕಳು ಮಱೆಯನರ್ಜುನಭೀಮಧರ್ಮಜರ ॥ ೨೭

ಎಲೆಲೆ ರಾಕ್ಷಸ ಭೀತಿ ಹೋ ಹೋ[3]
ನಿಲಲಿ ನೀವ್ ನಿಮಿಷಾರ್ಧಮಾತ್ರಕೆ[4]
ಗೆಲುವರೀ ನೃಪರೆನುತ ಮುನಿ ರಕ್ಷೋಘ್ನಸೂಕ್ತವನು ।
ಹಲವುವಿಧದಲಿ ಜಪಿಸಿ ದಿಙ್ಮಂ
ಡಲದ ಬಂಧವ ರಚಿಸಿ ಜನಸಂ
ಕುಲವ ಸಂತೈಸಿದನು ಧೌಮ್ಯನು ಮುಂದೆ ಭೂಪತಿಯ ॥ ೨೮

ಪಾಂಡವಕಿರ್ಮೀರರ ಸಂವಾದ.

ಆರು ನೀವ್ ನಡುವಿರುಳು ಪಾಂಡುಕು
ಮಾರಕರು ನಾವಿತ್ತಲೇನು ವಿ
ಚಾರಿಸಲು ನೀವಾರು ನಾವಾ ಬಕಹಿಡಿಂಬಕರ ।
ವೈರಿಗಳಲಾ ಹೊಲ್ಲಹೇನು ವಿ
ಕಾರಿಗಳನೊಡೆಹೊಯ್ದು ಶೋಣಿತ
ವಾರಿಯೋಕುಳಿಯಾಡಬೇಹುದೆನುತ್ತ ಖಳ ಜಱಿದ ॥ ೨೯

---

1 ದಲ್ಲಿ ಪಾಂಡುಕುಮಾರಕರ ಸೇನೆ, ಡ.	2 ಮಾನಿಸರ, ಚ.
3 ಹೋಗದೆ, ಚ.	4 ನಿಲು ನಿಲೇವ್ರೋ ನಿಮಿಷಮಾತ್ರಕೆ, ಚ.

ಭೀಮನ ಪರಾಕ್ರಮವಾಕ್ಯ

ಮಿಡಿದನರ್ಜುನ ಧನುವನಾತನ
ತಡೆದು ನಿಂದನು ಭೀಮನಸುರನ •
ಕೆಡೆಹಿ ಕಾಮ್ಯಕವನದ ಭೂಮಿಯ ಭೂತಸಂತತಿಗೆ ।
ಬಡಿಸುವೆನು ನೀ ಸೈರಿಸೆನುತವ
ಗಡಿಸಿದನು ಕಲಿ ಭೀಮನಂತ್ಯದ
ಸಿಡಿಲ ಸೆಱೆಬಿಟ್ಟಂತೆ ಬೊಬ್ಬಿಡುತಿರ್ದನಾಭೀಮ ॥ ೩೦

ದೈತ್ಯನ ಪರಾಕ್ರಮವಾಕ್ಯ.

ಎಂಬನೇನನು ಪವನಜನ ಕೈ
ಕೊಂಬದೈತ್ಯನೆ ಹೆಮ್ಮರನ ಹೆ
ಗ್ಗೊಂಬ ಮುಱಿದನು ಸವೆಱಿದನು ಶಾಖೋಪಶಾಖೆಗಳ ।
ತಿಂಬೆನಿವನನು ತಱಿದು ತಮ್ಮ ಹಿ
ಡಿಂಬಕನ ಹಗೆ ಸಿಲುಕಿತೇ ನಾ
ನಂಬಿದುದು ಬಲುದೈವವೆನುತಿದಿರಾದನಮರಾರಿ ॥ ೩೧

ಹಣುಗುವಾಯತದೃಷ್ಟಿಯೋರೆಯ
ಕುಣಿವಮೀಸೆಯ ದೈತ್ಯನೊಲಿದಿ
ಟ್ಟಣಿಸಿ ಬರಲಾ ಭೀಮನಾಧರ್ಮಜಗೆ ಮಾರುತಗೆ ।
ಕ್ಷಣದಿ ನಮಿಸುತುದಾರವೀರಾ
ಗ್ರಣಿ ಕಿಡಿಯ ವದನದಲಿ ಸೂಸುತ
ಸೆಣಸಲನುವಾಗಿರ್ದ ಕೇಳ್ ನೃಪ ಸಮರಸಂಭ್ರಮವ ॥ ೩೨

ಯುದ್ಧ ಜರುಗಿದಕ್ರಮ.

ಹೊಯ್ದನವನುರವಣಿಸಿ ಕುಸಿದೊಡೆ [1]
ಹೊಯ್ದು ಹೊಕ್ಕನು ಭೀಮನೆಲವೋ
ಕೈದು ಮರನೇ ಸೆಳಗೆ ಸಡೆವುದೆ ಭದ್ರಮದದಂತಿ ।

---

[1] ಮುಱಿದೊಳ,

ಕೈದುವಿಲ್ಲಾ ತರಿಸಿ ಕೊಡುವೆನು
ಕೈದುವನು ಬಿಲುಸರಳನೆನುತವೆ
ಹೊಯ್ದು ಹುರಿಯೋಹುರಿ ಯೆನುತ ಗಹಗಹಿಸಿದನು ಭೀಮ ॥ ೩೩

ಮುಳುಕಿಸುವ ಪವನಜನ ನೆತ್ತಿಯ
ನೆಱಗಿದನು ಬೞಿಕವನ ಹೊಯ್ಲಿನ
ಬಿಱುಸಿನೈಯ್ಯನೊ ಸಿಡಿಲ ಶಿಷ್ಯನೊ ವಜ್ರಕರಹತಿಯೊ ।
ಕಱಗಿದನು ಮಯಣಾದಿಮಗಳಿಂ
ದೆಱೆದ ಕಾಹಿನ ಕಱುವೆನಲು ಕು
ಕ್ಕುರಿಸಲಸುರನನಿಕ್ಕಿದನು ಚಾಪಳಚಪೇಟದಲಿ ॥ ೩೪

ಕಿರ್ಮೀರನ ಮರಣ.

ಡೆಂಡಣಿಸಿ ಸುರವೈರಿ ದೊಪ್ಪನೆ
ದಿಂಡು ಗೆಡೆದನು ನೀಲಶೈಲದ
ದಂಡಿಕಾಱನ ದೇಹಗರ್ತದ ರಕ್ತನಿರ್ಝರದ ।
ದೊಂಡೆಗರುಳಿನ ಬಾಯಿಜೊಲಿನ
ಕುಂಡಲಿತಕರಜಂಘೆಗಳ ಬಿಡು
ಮಂಡೆಗೆದಱಿದ ಖಳನ ಕಂಡುದು ಭೂಸುರವ್ರಾತ ॥ ೩೫

ಅರಸ ಹೇೞುವುದೇನು ಹೋರಿದ
ನರೆಘಳಿಗೆ ಕೊಂಡಾಡಿ ಬೞಿಕಿ
ಟ್ಟೊರಸಿ ಹುಡಿಯಲಿ ಹೂೞಿದನು ಕಿರ್ಮೀರದಾನವನ ।
ಬೆಱಸಿತಾ ವಿಪ್ರೌಘವಾಮುನಿ
ವರಿಯರೀಕಾಮಿನಿಯರೀ ನೃಪ
ವರನ ಪರಿಕರವಾಮಹಾಕಾಮ್ಯಕವನಾಂತರವ ॥ ೩೬

ತಳಿತು ಬಿಟ್ಟುದು ಕೂಡೆ ಹರಹಿನ
ಹೞುವೆದಲಿ ದ್ವಿಜನಿಕರ ರಚಿಸಿದ
ತಳಿರಗುಡಿಗಳ ಪರ್ಣಶಾಲೆಯ ಭದ್ರಭವನಿಕೆಯ ।

ಮೆಳೆಯ ಮಂಟಪ ಹೊದಱದುಱುಗಲ
ನೆಳಲ ಚೌಕಿಗೆ ವಿಪುಳವರಸಂ
ಕುಳದೊಳೋಲಗಶಾಲೆ ಮೆಱೆದುದು ಧರ್ಮನಂದನನ ॥ ೨೭

ಆಸಕಲಸಾಮ್ರಾಜ್ಯಲಕ್ಷ್ಮಿವಿ
ಲಾಸದರಮನೆಗಳನು ಮಱಸಿದು
ದಾಶರಭಶಾರ್ದೂಲಸೇವಿತಘೋರಕಾಂತಾರ ।
ಆಸುಧಾಕಲಿತಾನ್ನವೇ ಫಲ
ರಾಸಿಯಾದುದು ಗೇಯರಸವಿ
ನ್ಯಾಸವೇ ಮಧುಮಕ್ಷಿಕವ್ರಜಜಂಬುಕಧ್ವಾನ ॥ ೨೮

ದಿನಪ ಕೃಪೆಮಾಡಿದನಲೇ ಕಾಂ
ಚನಮಯದ ಭಾಂಡವನು ಬೞಕಾ
ವನಜಮುಖಿ ಮಾಡಿದ ಸುಪಾಕದ ಷಡ್ರಸಾನ್ನದಲಿ ।
ಮುನಿಜನಕೆ ಪರಿಜನಕೆ ಭೂಸುರ
ಜನಕೆ ತುಷ್ಟಿಯ ಮಾಡಿ ಭೂಪತಿ
ವನದೊಳಿರ್ದನು ವೀರನಾರಾಯಣನ ಕರುಣದಲಿ ॥ ೨೯

ಒಂದನೆಯ ಸಂಧಿ ಮುಗಿದುದು.



## ಎರಡನೆಯ ಸಂಧಿ.

**ಸೂಚನೆ.**

ಸಕಲಯದುಬಲಸಹಿತ ಭಕ್ತ
ಪ್ರಕರಪಾಲಕನೊಲಿವು ಮಿಗೆ [1] ಕಾ
ಮ್ಯಕಮಹಾಕಾನನಕೆ ಬಿಜಯಂಗೈದನಸುರಾರಿ ।

[1] ನೊಲವಿನಲಿ, ಚ.

ಪಾಂಡವರ ವರ್ತಮಾನವನ್ನು ಕೇಳಿ ಕೃಷ್ಣನು ಅವರಿದ್ದೆಡೆಗೆ ಬಂದುದು.

ಅರಸ ಕೇಳೈ ದ್ವಾರಕಾಪುರ
ವರಕೆ ಬಂದುದು ವಾರ್ತೆ ಪೀತಾಂ
ಬರನ ಬಹಳಾಸ್ಥಾನದಲಿ ವರ್ತಿಸಿದುದಡಿಗಡಿಗೆ ।
ಧರೆಸಹಿತ ನಿಜವಸ್ತುವಾಹನ
ಪರಮವಿಭವವ ಬಿಸುಟು ಬಾರಿಯ
ಪರಿಭವದಿ ನಟ್ಟಡವಿಯೊಕ್ಕರು ಪಾಂಡುಸುತರೆಂದು ॥ ೧

ಕೇಳಿ ತಲೆದೂಗಿದನು ಮೂಗಿನ
ಮೇಲುವೆರಳಿನ ಹೊತ್ತುದುಗುಡದ
ತೂಳಿದುಬ್ಬೆಯ ನೆಟ್ಟನೋಟದ ನೆಗ್ಗಿನುತ್ಸವದ ।
ಹೂಳಿದೂಹೆಯ ಹಿಡಿದ ನೆನಹಿನ
ಹೇಳಲಳಿದೆನೆ ಹುದಿದ ಭಾವದೆ
ಲಾಲಿಸಿದನಸುರಾರಿ ದೂತವ್ರಜದ ಬಿನ್ನಪವ ॥ ೨

ಅಕಟ ಕಪಟದ್ಯೂತದಲಿ ನೃಪ
ಮುಕುರದುನ್ನತಿ ಮುಳಿದುದೇ ಕೌ
ಳಿಕದಲೀ ಕೌರವರು ಕೊಂಡರೇ ಧರ್ಮಜನ ನೆಲನ ।
ಅಕುಟಿಲರಿಗೇಕಿದು ನಿರಾಬಾ
ಧಕರಿಗೇಕಿದು ಸಕಲಸುಜನ
ಪ್ರಕರವೆಂದ್ಯರಿಗೇಕೆನುತ ಬಿಸುಸುಯ್ದನಸುರಾರಿ[1] ॥ ೩

ಹಿರಿದು ಹರಿ ಚಿಂತಿಸಿದನೀವ್ಯತಿ
ಕರವನಳಿಯದ ಮುಗ್ಧರಿದನಾ
ರಳಿವರೈ ವಿಶ್ವಂಭರಾಭಾರೋಪರೋಧನಕೆ ।

---

[1] ನುತ್ತಸುರಾರಿ ಚಿಂತಿಸಿದ, ಚ.

ಧರಣಿಯಲಿ ವ್ಯಗೊಂಡು ದೈತ್ಯರ
ನೊರಸಿದನು ಬಳಿಕುಳಿದ ಪಾಂಡವ
ಕುರುನೃಪರ ಕದಡಿಸಿದನೆಲೆ ಭೂಪಾಲ ಕೇಳೆಂದ ॥ ೪

ಏನನೆಂಬೆನು ಜೀಯ ಕಡು ದು
ಮ್ಮಾನದಲಿ ಹೊಱವಂಟು ಬಂದನು
ದಾನವಾಂತಕನೈದಿದುವು ದಂಡಿಗೆಗಳರಸಿಯರ ।
ಆನಿಖಿಳನೃಪವರ್ಗಯಾದವ
ಸೇನೆ ಕವಿದುದು ಪಾಂಡುಪುತ್ರರ
ಕಾನನವ ಕರುಣಾಳು ಹೊಕ್ಕನು ಹಲವು ಪಯಣದಲಿ ॥ ೫

ಆಗ ಅನೇಕರಾಜರ ಆಗಮನ.

ಕೇಳಿದಾಗಳೆ ಬಂದರಾಪಾಂ
ಚಾಲಕೈಕಯಧೃಷ್ಟಕೇತುವ
ರಾಳಕುಂತೀಭೋಜಸೃಂಜಯಸೋಮಕಾದಿಗಳು ।
ಮೇಲೆಮೇಲೀನಾಲ್ಕುದಿಕ್ಕಿನ
ಮೂಲೆಯರಸುಗಳಿವರ ಕಂಡುಪ
ಲಾಲಿಸಲು ಬರುತಿರ್ದರಾಕಾಮ್ಯಕವಮಹಾವನಕೆ ॥ ೬

ಪಾಂಡವರು ಸರ್ವರನ್ನು ಆದರಿಸಿದುದು.

ಇವರು ಬಂದರು ನಿಖಿಳಭೂಸುರ
ನಿವಹಸಹಿತಿದಿರಾಗಿ ವರಬಾಂ
ಧವರೊಳಭಿವಂದ್ಯರಿಗೆ ತತ್ಸಮರಿಗೆ ಕನಿಷ್ಠರಿಗೆ ।
ಅವರವರಿಗವರುಚಿತಸತ್ಕಾ
ರವನು ಮಾಡಿ ಮುರಾರಿಯಂಘ್ರಿಯ
ನವಿರಳಾಶ್ರುಗಳಿಂದನಾದಿದರರಸ ಕೇಳೆಂದ ॥ ೭

ಬೇಱೆ ಬೇಱೆಯ್ವರನು ತೆಗೆದು ಮು
ರಾರಿಯಪ್ಪಿದನಡಿಗಡಿಗೆ ದೃಗ್

ವಾರಿಗಳನೊರಸಿದನು ಪೀತಾಂಬರದ ಸೆಱಗಿನಲಿ ।

ದ್ರೌಪದಿಯು ಶ್ರೀಕೃಷ್ಣನ ಪಾದದ ಮೇಲೆ ಬಿದ್ದುದು.

ಸಾರೆಸಾರೆನಲುಘ್ಹಡಣೆಯು ವಿ
ಕಾರವಿನ್ನೇಕೆನುತ ರಾಯನ
ನಾರಿ ಬಂದಳು ಕವಿದು ಬಿದ್ದಳು ಹರಿಯ ಚರಣದಲಿ ॥ ೮

ಬಱಲಿದಳು ದೆಸೆಯೊಡನೊಱಲೆ ಮಿಗೆ
ಹೊಱಳಿದಳು ಹರಿಪಾದದಲಿ ಮೈ
ಮಱೆದಳಂಗನೆ ತನುವ ಮುಸುಕಿದ ಕೇಶಪಾಶದಲಿ ।
ಕಱಗಿದಳು ಕಂದಿದಳು ಮೊಮ್ಮಲ
ಮಱುಗಿ ಕರುಗಂದಿದಳು ದೃಗ್ಜಲ
ದೊಱತೆಯುಕ್ಕಿತು ಮೇಲೆ ಮೇಲೆ ಮಹೀಶನಂಗನೆಗೆ ॥ ೯

ಶ್ರೀಕೃಷ್ಣಸ್ತುತಿ.

ಹಿಂದೆ ಸೀರೆಯ ಸೆಳೆಯಲಕಟ ಗೋ
ವಿಂದ ರಕ್ಷಿಸನಾಥನಾಥ ಮು
ಕುಂದ ಕಾಯ್ದ್ಯ ಕೃಷ್ಣ ರಕ್ಷಿಸು ಕರುಣಿಸಸುರಾರಿ ।
ಇಂದಿರಾಪತಿಯೇ ಯಶೋದಾ
ನಂದನನೆ ಕಾರುಣ್ಯನಿಧಿ ಸಲ
ಹೆಂದೊಡುಱುಹಿದ ದೈವ ನೀ ಮೈದೋಱುದೈ ತನಗೆ ॥ ೧೦

ಶ್ರುತಿಗಳಿಗೆ ಮೈದೋಱೆ ಸುಪತಿ
ವ್ರತೆಯರಿಗೆ ಗೋಚರಿಸೆ ಯತಿಸಂ
ತತಿಗೆ ನಿರ್ಮಳಸಾರಸರ್ವಜ್ಞಾನಭಾವನೆಗೆ ।
ಮತಿಗೊಡದ ಮಹಿಮಾಂಬುನಿಧಿ ಯೆನ
ಗತಿಶಯುವ ನೆಱೆ ಮಾಡಿ ಲಜ್ಜಾ
ಸ್ಥಿತಿಯನುಱುಹಿದ ದೈವ ನೀ ಮೈದೋಱುದೈ ತನಗೆ ॥ ೧೧

ಪತಿಗಳಿವರಂಜಿದರು ಧರ್ಮ
ಸ್ಥಿತಿಯನಱುದವರಳುಕಿದರು ತ
ತ್ಪಿತೃಪಿತಾಮಹಗುರುಗಳಡಗಿದರವನಿಯನು ಬಗಿದು ।
ಗತಿವಿಹೀನೆಗೆ ಕೃಷ್ಣ ನೀನೇ
ಗತಿಯೆನುತ ಬಾಯಿಬಿಡಲು ಲಜ್ಜಾ
ಸ್ಥಿತಿಯನುೞುಹಿದ ದೈವ ನೀ ಮೈದೋಱದೈ ತನಗೆ ॥ ೧೦

ಹೆಸರುಗೊಂಡರೆ ಹಿಂದೆ ಬಂದು
ಬ್ಬಸದ ಭಾರವ್ಯಸನವನು ಹಿಂ
ಗಿಸಿದೆ ಸಾಕ್ಷಾತ್ಪದದ ದರುಶನವೇನನಿತ್ತಪುದೊ ॥
ಹೆಸರುಗೊಳಲಱಿಯದೆ ಮನೋವಾ
ಗ್ವಿಸರ ಮರಳಿದ ತರ್ಕನಿಗಮ
ಪ್ರಸರಣದ ಪರಬೊಮ್ಮ ನೀ ಮೈದೋಱದೈ ತನಗೆ ॥ ೧೩

ದಾನಯಜ್ಞ ತಪೋವ್ರತಾನು
ಷ್ಠಾನನಿಷ್ಠರು ಕಾಣರಷ್ಟವಿ
ಧಾನಯೋಗದ ಸಿದ್ಧರಱಿಯರು ನಿಮ್ಮ ಸುೞವುಗಳ ।
ಜ್ಞಾನಮುದ್ರಾತ್ರಿಪುಟಿಯನು ಸಂ
ಧಾನರಹಿತಜ್ಞಪ್ತಿರೂಪನು
ನೀನೆನಿಪ ಪರಬೊಮ್ಮ ನೀ ಮೈದೋಱದೈ ತನಗೆ । ೧೪

ಕಾಯಿದೈ ಪ್ರಹ್ಲಾದಮಾರ್ಕಂ
ಡೇಯುವನಗಜವಂಬರೀಷನ
ಕಾಯಿದೈ ಕಾರುಣ್ಯದಲಿ ಪಾತಕಿಯಜಾಮಿಳನ ।
ಕಾಯಿದೈ ಗೋವಿಂದ ಯೆನೆ ಯೆ
ನ್ನಾಯತಿಕೆಯಭಿಮಾನವನು ನೀ
ಕಾಯಿದೈ ಯೆಂದೆನುತ ಪದದಲಿ ಹೊಱಳಿದಳು ತರಳೆ ॥ ೧೫

ದ್ರೌಪದಿಗೆ ಶ್ರೀಕೃಷ್ಣನ ಸಮಾಧಾನ

ಏಳು ತಾಯೆ ಮಹಾಸತಿಯೆ[1] ಪಾಂ
ಚಾಲಿ ನೊಂದಾ ತಂಗಿ ಯೆನುತ ಕೃ
ಪಾಳು ಕಂಬನಿದೊಡೆದು ಕೊಡಹಿದನವಯವದ ರಜವ ।
ಮೇಲು ಮುಚ್ಚಳದೆಱೆದ ತನುವಿನ
ಹೇಳಿಗೆಯ ಶೋಕಾಹಿ ಯೆಂತಿರೆ
ಲೋಲಲೋಚನೆಯುಬ್ಬಲು ಮಿಗೆ ಹೆಕ್ಕಳಿಸಿತಡಿಗಡಿಗೆ ॥ ೧೬

ಆಸಕಲಪರಿವಾರವಾಧರ
ಣೀಶರಾಮುನಿನಿಕರವಾಜನ
ವಾಸತೀನಿಕುರುಂಬವಾಗಜಘೋಟಕವ್ರಾತ ।
ಆಸರೋಜಾನನೆಯ ಬಹಳ
ಕ್ಲೇಶವನು ಕಂಡಕ್ಷಿಜಲವಾ
ರಾಸಿಯಲಿ ತೇಂಕಾಡಿತೇನೆಂಬೆನು ಮಹಾದ್ಭುತವ ॥ ೧೭

ಮುಡಿಯ ಸಂವರಿಸಬಲೆ ಸೀರೆಯ
ನುಡು ನವಾಂಬರವಿದೆ ವಿರೋಧವ
ಬಿಡು ಸುಯೋಧನರಾಜಸಂತತಿಯುರಿದುದಿನ್ನೇನು ।
ಕೆಡಿಸಿಕೊಂಡರು ನಾಯ್ಗಳಿನ್ನದ
ನುಡಿದು ಫಲವೇನಕಟ ಕೈಕೊಂ
ಡಷ್ಟವಿಯನುಭವ ಸವೆಯೆ ಸೈರಿಪುದೆಂದನಸುರಾರಿ ॥ ೧೮

ತುಱುಬುಕಟ್ಟುವೆ ಹದನ ನಿಮ್ಮಡಿ
ಯಱಿಯದೆಂಬೆನೆ ಸಕಲಸಚರಾ
ಚರದ ಚೇತನರೂಪದೇಹಿನಿಕಾಯಕೃತಿಸಾಕ್ಷಿ ।
ತಱಿದು ದುಶ್ಶಾಸನನ ವಕ್ಷದೊ

[1] ಸರೋಜಮುಖಿ, ಚ.

ಳೊಱೆವ ರಕುತದಲದ್ದಿ ಕಟ್ಟುವ
ತುಱುಬನಱಿಯಾ ಕೃಷ್ಣ ಯೆಂದಳು ನಗುತ ಪಾಂಚಾಲಿ ‖ ೧೯
ಐಸಲೇ ದುರ್ಯೋಧನಾದಿಗ
ಳೇಸರವದಿರು ಭೀಮಪಾರ್ಥರ
ಬೀಸಱಿಕೆ ಬಲುಗೈಯ ಬರ್ಹಿರ್ಮುಖರ ಭಾರವಣೆ ।
ದೂಷಕನ ರಕ್ತದಲಿ ನಿನ್ನಯ
ಕೇಶವನು ಕಟ್ಟಿಸುವೆ ನಿನ್ನೀ
ಭಾಷೆ ಯೆನ್ನದು ತಾಯೆ ತವಕಿಸಬೇಡ ನೀನೆಂದ ‖ ೨೦
ವರತಪಸ್ವಿನಿ ನೀನು ನಿನ್ನನು
ಕೆರಳಚಿದರೇ ನಾಯ್ಗಳಕಟಾ
ಭರತಸಂತತಿ ಫಲಿತಕದಳಿಯ ತೆಱದಲಾಯಿತಲ ।
ಕುರುಡನಱಿಯದೆ ಹೋದಡೆಯು ಕಂ
ಗರುಡರಾದರೆ ಭೀಷ್ಮವಿದುರಾ
ದ್ಯರು ಮಹಾದೇವೆನುತ ಮುರರಿಪು ತೂಗಿದನು ಶಿರವ ‖ ೨೧
ಶಕುನಿ ಕಲಿಸಿದ ಕಪಟವೇ ಕೌ
ಳಿಕದ ಜೂಜಿದು ನಿಮ್ಮನೀ ಕಾ
ಮ್ಯಕಕೆ ತಂದುದು ದ್ಯೂತದಲಿ ನಾವಿಲ್ಲಲೇ ಯೆನಲು ।
ಸಕಲಜೀವರ ಕರ್ಮಸಾಕ್ಷಿ
ಪ್ರಕಟ [1] ಚೈತನ್ಯಸ್ವರೂಪಾ
ತ್ಮಕನು ನೀನಲ್ಲಿಲ್ಲ [2] ಹುಸಿ ಹುಸಿ ಯೆಂದಳಿಂದುಮುಖಿ ‖ ೨೨

ನಿಮಗೆ ತೊಂದರೆಬಂದಾಗ ನಾನು ದ್ವಾರಕೆಯಲ್ಲಿರಲಿಲ್ಲವೆಂದು
ಶ್ರೀಕೃಷ್ಣನ ವಾಕ್ಯ.

ದೇವಿ ತಾಸಿದನಱಿದೊಡಾವಸು [3]
ದೇವನಾಣೆ ಮಹಾದ್ಭುತವನದ [4]

1 ಪ್ರಕರ, ಚ. 2 ನೀನಲ್ಲಿಲ್ಲ, ಚ.
3 ನಿದನಱಿದೆನಾದೊಡೆ, ಡ. 4 ಭಾವಿಸಲು ವಸುದೇವನಾಣೆಪು, ಡ.

ನಾವನಱಿಯನು ಯದುನೃಪಾಲವಿಪತ್ಪರಂಪರೆಯ[1] |
ನೀವು ಮಾಡಿದ ಯಜ್ಞಮುಖದ ಫ
ಲಾವಳಿಯಲಾವಿರಲು ಮುತ್ತಿತು
ದೇವರಿಪುಬಲನಿಕರವಸ್ಮದ್ದ್ವಾರಕಾಪುರಿಯ ॥ ೨೩

ಸಾಲ್ವಪುರಿಗೆ ಯುದ್ಧಕ್ಕೆ ಹೋದ ಸಂಗತಿಯನ್ನು ಹೇಳಿದುದು.

ಲಗ್ಗೆಗಳುಕುವುದಲ್ಲಲೇ ಬಲು
ದುರ್ಗವದು ದುರ್ಭೇದವದಱೊಳು
ಗಗ್ಗಳೆಯರಿದ್ದರು ಹಲಾಯುಧಮನ್ಮಥಾದಿಗಳು |
ಬಗ್ಗಿ ಕವಿವಕಠೋರದೈತ್ಯರ
ನುಗ್ಗುನುಸಿಮಾಡಿದರು ಸೋಲದ[2]
ಸುಗ್ಗಿಯಾಯಿತು[3] ಮಾರ್ಬಲದೊಳಬುಜಾಕ್ಷಿ ಕೇಳೆಂದ ॥ ೨೪

ಅಳುಕಿ ಮುತ್ತಿಗೆದೆಗೆದು ಸಾಲ್ವನ
ದಳ ಮುಱಿದು ನಿಜಪುರಕೆ ಹಾಯ್ದುದು
ಗೆಲವು ಸಾತ್ಯಕಿ[4] ರಾಮಕಾಮಾದಿಗಳ ವಶವಾಯ್ತು |
ಬಳಿಕ ನಿಮ್ಮಯ ರಾಜಸೂಯಕೆ
ಕಳಶವಿಟ್ಟು ಮದೀಯನಗರಿಯ
ಕಳಕಳವ ಸಂತೈಸಿ ನಡೆದೆವು ಸಾಲ್ವಪುರಿಗಾಗಿ ॥ ೨೫

ಏನನೆಂಬೆನು ಸಾಲ್ವಪುರದ ನ
ವೀನಮಾಯಾರಚನೆಯನು ತನ
ಗಾನಲಸದಳ ವುಱದಗೀರ್ವಾಣರಿಗೆ ಗೋಚರವೆ |
ದಾನವನ ಮಾಯಾಪುರದ ಸಂ
ಸ್ಥಾನವಮರ್ಮವನಱಿದು ಶರಸಂ
ಧಾನದಲಿ ಸಂಹರಿಸಿದೆವು ಸಾಲ್ವಾದಿರಿಪುಭಟರ ॥ ೨೬

---

1 ಹಾವಿಸೋದವನೇವೊಗಟ್ವೆನು ಯದುಪರಂಪರೆಯ, .ಡ.
2 ಹರಣದ, ಚ.　3 ನೆಱೆದುದು, ಚ.　4 ನಮ್ಮಯ, ಚ.

ಆಗ ನಿಮ್ಮಲ್ಲಿ ಜೂಜು ಸಂಭವಿಸಿತೆಂದು ಶ್ರೀಕೃಷ್ಣನ ವಚನ

ಅತ್ತಲಾಕೋಳಾಹಳದಲಿರ
ಲಿತ್ತಲಾದುದು ಜೂಜು ನಿಮ್ಮ ವಿ
ಪತ್ತು ಕಂಡುದು ತೆರಹ ತಪ್ಪಿಸಿ ನಮ್ಮ ಸುಚಿವುಗಳ ।
ಇತ್ತಲಾವಿರೆ ಮೋಣು ದ್ವಾರಕೆ
ಯತ್ತಲಿರೆ ನೀವಡವಿಯೊಕ್ಕರೆ
ಹೆತ್ತಳೋ ದೇವಕಿ ಮಗನನೆಂದನು ಮುರಧ್ವಂಸಿ ॥ ೧೭

ದ್ರೌಪದಿಯು ಮಾಡಿದ ಶ್ರೀಕೃಷ್ಣಸ್ತುತಿ.

ದ್ವಾರಕೆಯುಲಿರು ಮೆತ್ಪುರದಲಿರು
ದೂರದಲ್ಲಿರು ಮೋಣು ನಿಮ್ಮಿಯು
ಸಾಚೆ ನಿಮ್ಮಡಿ ಇರಲಿ ನಿಮ್ಮಾ ಪಾಂಡುನಂದನರ ।
ಭಾರ ನಿನ್ನದು ಭಕ್ತಜನದಾ
ಧಾರ ನಿನ್ನದನಾಥರಾವತಿ
ಕಾರುಣಿಕ ನೀನೆಂದು ಬಿದ್ದಳು ಮತ್ತ ಚರಣದಲಿ ॥ ೧೮

ಮಗನ ಕರೆವರೆ ಯಮನ ದೂತರ
ತಗುಳುವಂದು ಸಮೀಪವರ್ತಿಯೆ
ನಗಧರ ಶ್ರೀಕಾಂತ ಸಲಹೆನೆ ಮುನಿಕುಮಾರಕನ ।
ಉಗಳಿಚಿದೆಲಾ ಮೃತ್ಯುವಿನ ತಾ
ಳಿಗೆಯಿನಂದು ಸಮೀಪವರ್ತಿಯೆ
ಜಗನುಮಯ ನೀ ಜಾಣನಹೆ ಯೆಂದಳು ಸರೋಜಮುಖಿ ॥ ೧೯

ನಿನ್ನ ಪ್ರತಿಜ್ಞೆಯನ್ನು ನಡೆಸಿ ಕೊಡುವೆನೆಂದು ಶ್ರೀಕೃಷ್ಣ ವಚನ.

ಆಯಿತೇಳೌ ತಂಗಿ ನೀ ಪಿರಿ
ದಾಯುಸವನನುಭವಿಸಲುದಿಸಿದೆ
ರಾಯನಾಡಿದ ಭಾಷೆ ಸಲಲಿ ವನಪ್ರವಾಸದಲಿ ।

ವಾಯುತನುಜನ ನುಡಿ ಯೆಲೇ ನಿ
ನ್ನಾಯತಿಕೆ ಹೋಣೆಯಾಪ್ರತಿಜ್ಞೆಗೆ
ತಾಯೆ ನಾ ಹೊಣೆ ಯೆಂದು ಕೊಟ್ಟನು ಸತಿಗೆ ನಂಬುಗೆಯ || ೩೦

ವನದಲ್ಲಿ ಕೆಲವು ಕಾಲವನ್ನು ಕಳೆಯಬೇಕೆಂದು ಹೇಳುವಿಕೆ.

ಸಂತವಿಟ್ಟನು ಬೇಱೆ ಬೇಱೆ ಕ್ರ
ತಾಂತಸುತಭೀಮಾದಿಗಳ ಮುನಿ
ಸಂತತಿಯ ಮನ್ನಿಸಿದನವರವರುಚಿತವೃತ್ತಿಯಲಿ |
ಎಂತು ಹದಿಮೂಱಬುದವೀನ್ನೃಪ
ಸಂತತಿಗೆ ಸೌಹಾರ್ದವಕಟ ವ
ನಾಂತರದಲೆಂದಸುರರಿಪು ನುಡಿದನು ಯುಧಿಷ್ಠಿರಗೆ || ೩೧

ಪಾಂಡವರ ಹೆಂಡರುಮಕ್ಕಳನ್ನು ಅವರವರ ತೌರುಮನೆಗಳಿಗೆ ಕಳುಹಿಸಿದುದು.

ಕಳುಹುವುದು ಸೌಭದ್ರನನು [1] ನಿಜ
ಲಲನೆಯರನವರವರ ತಾಯ್ಮನೆ
ಗಳಿಗೆ ಬೀಟ್ಕೊಡಿ ನಿಮ್ಮ ಪಂಚದ್ರೌಪದೀಸುತರ |
ಹಬುವ ದಾಟಲಿ ದ್ರುಪದನಂದನೆ
ಯುಱಲಸಿಖಿಗಿಂಧನವಲೇ ಕುರು
ಕುಲದ ಕರಡದ ಬಣಬೆ ಕಾದುವುದಿಲ್ಲ ಬೞಿಕೆಂದ [2] || ೩೨

ಎಂದು ಕಳುಹಿ ಸುಭದ್ರೆಯನು ನರ
ನಂದನನ ಬೀಟ್ಕೊಳಿಸಿದನು ನೃಪ
ನಂದನರ ಕಳುಹಿಸಿದನಾಪಾಂಚಾಲಪತಿಯೊಡನೆ |
ಇಂದುವದನೆಯ ಸಂತವಿಟ್ಟು ಮು
ಕುಂದ ರಥವೇಱಿದನು ಕುಂತೀ
ನಂದನರು ಕಳುಹುತ್ತಬಂದರು ಕಮಲಲೋಚನನ || ೩೩

[1] ಸೌಭದ್ರೆಯನು, ಚ. [2] ಕಾಮರುಹುವುದು ಕೇಳೆಂದ, ಚ.

ಬೀಳುಕೊಂಡರು ಕೃಷ್ಣನನು ಪಾಂ
ಚಾಲಪತಿಯುನು ಪಂಚಕೈಕೆಯು
ಚೋಳಕೇರಳಪಾಂಡ್ಯಕುಂತೀಭೋಜಸೃಂಜಯರ |
ಬೀಳುಕೊಟ್ಟರು ಧೃಷ್ಟಕೇತುನೃ
ಪಾಲಮೊದಲಾದಖಿಳಧರಣೀ
ಪಾಲಕರು ದುಗುಡದಲಿ ಹೊಕ್ಕರು ತಮ್ಮ ನಗರಿಗಳ || ೩೪

ಎರಡನೆಯ ಸಂಧಿ ಮುಗಿದುದು.

---

## ಮೂರನೆಯ ಸಂಧಿ.

### ಸೂಚನೆ.

ಯಜ್ಞಪುರುಷನ ನೇಮದಲಿ ಪಿತೃ
ಯಜ್ಞವನು ಯಮಸೂನು ರಚಿಸಲ
ಭಿಜ್ಞಮುನಿಗಳ ವರಿಸಿ ವಿಧಿವಿಹಿತದಲಿ ಪೂಜಿಸಿದ ||

ಪಾಂಡವರ ಪ್ರಾರ್ಥನೆಯಂತೆ ಇನ್ನೊಂದು ದಿವಸ ಶ್ರೀಕೃಷ್ಣನು ಇರುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ಕುಂತಿಯ ಪತಿಯ ತದ್ದಿನ
ಕಾಲ ಬಂದುದು ಕೃಷ್ಣನಿರುತಿರೆ ತದ್ವನಂಗಳಲಿ |
ಹೇಳಿದರೆ ಶ್ರೀಕೃಷ್ಣನೆಂದನು
ಕೇಳು ಧರ್ಮಜ ಋಷಿಗಳೈವರ
ಕಾಲದಲಿ ಕರೆ ನಾಳೆತನಕಿಹೆನೆಂದನಸುರಾರಿ || ೧

ಆಗ ಪಾಂಡುರಾಯರ ಶ್ರಾದ್ಧ ನಡೆದಕ್ರಮ.

ಮಾಡು ವಿಶ್ವೇದೇವರಿಬ್ಬರ
ರೂಢರೀದೂರ್ವಾಸಧೌಮ್ಯರ
ನೋಡಿ ಮಾಡೈ ಮುಖ್ಯಕ್ಷಣದಲಿ ವ್ಯಾಸಕೌಶಿಕರ ।
ಮಾಡು ಪ್ರಪಿತಾಮಹರ ಠಾವಿಗೆ
ಬೇಡಿಕೊಳ್ ಜೈಮಿನಿಯನತಿಥಿಗೆ
ಮಾಡು ನಮ್ಮನು ಶ್ರಾದ್ಧರಕ್ಷೆಗೆ ಭೂಪ ಕೇಳೆಂದ ॥ ೧

ಕೇಳಿ ಧರ್ಮಜ ಕ್ಷಣವನಿತ್ತನು
ಮೇಲೆ ನಾಲ್ವರಿಗಲ್ಲಿ ಜೈಮಿನಿ
ಯಾಲಯವ ನಾವಱಿಯೆವೆಂದೆನೆ ಕೃಷ್ಣ ನಸುನಗುತ ।
ಲೋಲಮುನಿಯಾಶ್ರಮವು ಹಿಮಗಿರಿ
ಶೈಲದೊತ್ತಿನಲಿರುವುದಲ್ಲಿಗೆ
ನೀಲಗಿರಿಯೆಂಬೊಂದು ನಗವಿದೆ ದಿವ್ಯವನದಲ್ಲಿ ॥ ೨

ಅಲ್ಲಿಗನಿಲಜ ಪೋಗಿ ಕ್ಷಣವನು
ನಿಲ್ಲದಿತ್ತೊಡೆ ಬೞಿಕ ಶ್ರಾದ್ಧವ
ನೊಲ್ಲೆನೆನ್ನನು ದುಃಖ ಬಂದರೆ ಪರರ ಕಾರ್ಯಕ್ಕೆ ।
ಒಲ್ಲೆನೆನ್ನನು ಶವವ ಹೊಱಲಿಕೆ
ಒಲ್ಲೆನೆನ್ನನು ಬಂದ ದುರಿತಕೆ
ಒಲ್ಲೆನೆನ್ನನು ಪರರ ಸುಖಗಳ ರಾಯ ಕೇಳೆಂದ ॥ ೪

ಒಲ್ಲೆನೆನ್ನನು ತೀರ್ಥಯಾತ್ರೆಯ
ನೊಲ್ಲೆನೆನ್ನನು ದೇವಯಾತ್ರೆಯ
ನೊಲ್ಲೆನೆನ್ನನು ಪರರ ವಂದಿಸೆ ವೇದಸಂಹಿತೆಯು ।
ಒಲ್ಲೆನೆನ್ನನು ನಿತ್ಯಕರ್ಮವ
ನೊಲ್ಲೆನೆನ್ನನು ದುಃಖಬಂದರೆ
ಒಲ್ಲೆನೆನ್ನನು ಪುಣ್ಯಕಥನವ ರಾಯ ಕೇಳೆಂದ ॥ ೫

ಭೂಮಿಯಲಿ ಪರರನ್ನಪಾನವ
ಸೋಮಶೇಖರ ಧರಿಸಲರಿಯನು
ಕಾಮುಕರು ತಾವೇನನರಿಸುವೆರರಸ ಚಿತ್ತೈಸು ।
ಭೂಮಿಸುರನೃಪವೈಶ್ಯಶೂದ್ರ
ಸ್ತೋಮದಲಿ ನೋಡಲ್ಕೆ ವಿಪ್ರ
ಸ್ತೋಮವೇ ಸತ್ಪಾತ್ರವೆಂದನು ದಾನವಧ್ವಂಸಿ ॥ ೬

ಅದನು ಧರಿಸಲು ದ್ವಿಜನೆ ಯೋಗ್ಯನು
ಮುದದಿ ಲೋಕವನುಂಡು ರಕ್ಷಿಸೆ
ಸದೆ ಬಡಿವನುಂಡವರ ಪಾಪವನಿದು ನಿರರ್ಥಕವೆ ।
ನದಿಗೆ ವಿಪ್ರಂಗನಲಗಾಗಲು
ವಿಧಿಸಿಹುದೆ ಯನುಚಿತವ ವೈರಿಗೆ
ಮುದದಿ ಸಂದೊಡೆ ನಾಲ್ಕು ವರ್ಣದೊಳಾರು ಹೇಳೆಂದ ॥ ೭

ಎಂದ ಮಾತನು ಕೇಳಿ ಧರ್ಮಜ
ನಂದು ಕಳುಹಿದನನಿಲಜನ ನಲ
ವಿಂದಲೈತಂದಂಘ್ರಿಗೆಱಗಿದನೊಲಿದು ಜೈಮಿನಿಗೆ ।
ತಂದೆ ನೀನಾರೆನಲು ಪವನಜ
ಬಂದಕಾರ್ಯವದೇನೆನಲು ತಾ
ಬಂದೆನಗ್ರಜ ಬೆಸಸೆ ನಿಮ್ಮಡಿಗೆಂದನಾಭೀಮ ॥ ೮

ಆವ ಕಾರಿಯ ವಾವ ಕಾರಣ
ವಾವುದಭಿಮತ ಬೆಸಸೆನಲು ಭೂ
ದೇವ ಬಿನ್ನಹ ತದ್ದಿವಸವಿದು ನಮ್ಮ ಜನಕಗೆ ।
ನೀವು ಕ್ಷಣವನು ಸ್ವೀಕರಿಸಿ ಯೆನೆ
ಭಾವದಲಿ ಕಡು ನೊಂದು ನಿನಗೀ
ತಾವನಾರಱುಹಿದರು ಯೆನೆ ಕೈಮುಗಿದನಾಭೀಮ ॥ ೯

ಭೀಮಸೇನನ ಮಾತಿಗೆ ಜೈಮಿನಿಯು ಚಿಂತೆ.

ಮುನಿಪನತಿಚಿಂತಿಸಿದನೆನಗೀ
ಘನತರದ ರಾಜಾನ್ನವಿದನಾ
ಘ್ಞಣಿಸುವೆನೆ ರಾಜಪ್ರತಿಗ್ರಹ ಕ್ರೂರತರವಿದನು ।
ತನಗೆ ಹರಿವುದೆ ಗಸಣೆ ಬೇಡೆಂ
ದೆನುತ ದೂರಾಶ್ರಮದೊಳಿರುತಿರೆ
ಮುನಿಪ ಮುನಿದನು ಕೃಷ್ಣಗಾವಪರಾಧಿ ತಾನೆಂದು ‖ ೧೦

ಬಲ್ಲೆನೆಂದೊಡೆ ಘಾತಕಕೆ ಕಡೆ
ಯಿಲ್ಲ ಧರಿಸಿದೊಡಿದಱ ಲಘುತನ
ವಿಲ್ಲದಿಹುದೇ ದೇಹದಲಿ ಮಾಸಾಂತಪರಿಯಂತ ।
ಎಲ್ಲಜನಮಾಡಿದ ಸುಕೃತಫಲ
ವೆಲ್ಲವಾತಗೆ ಸೇರುವುದು ನಮ
ಗಿಲ್ಲ ಹೋ ಹೊ ಶಿವಾ ಯೆನುತ ತುಂಬಿದನು ಕಂಬನಿಯ ‖ ೧೧

ಆವಪರಿಯುಪರಾಧವೋ ನಮ
ಗೀವಿಪತ್ತಡಸಿದುದು ಶಿವ ಶಿವ
ದೇವ ನೀನೇ ಬಲ್ಲೆ ಯೆನುತವೆ ತೂಗಿದನು ಶಿರವ ।
ನಾವು ನೆನೆದಿಹುದೊಂದು ಹರಿ ತಾ
ಭಾವಿಸಿದ ಮತ್ತೊಂದನೆನುತವೆ
ದೇವಋಷಿ ನುಡಿಸಿದನು ಪವನಜ ಹೇೞು ಹೇೞೆಂದ ‖ ೧೨

ಆಗ ಭೀಮಸೇನನು ಶ್ರೀಕೃಷ್ಣನ ಅಪ್ಪಣೆಯಂತೆ ತಮ್ಮನ್ನು ಕರೆದುದು ಯೊಂದು ಹೇಳುವಿಕೆ.

ಎಂದ ನಮ್ಮಗ್ರಜನು ದೇವ ಮು
ಕುಂದನನು ಬೆಸಗೊಂಡ ಜೈಮಿನಿ
ಯೊಂದಿದಾಶ್ರಮವಾವುದೆನೆ ಕರುಣಿಸಿದನಿಂದೆಮಗೆ ।

